# ಶ್ರೀದವಿಠಲದಾಸರ ಕೃತಿಗಳು

(ದಾಸಸಾಹಿತ್ಯ ಯೋಜನೆಯ 29ನೆಯ ಕುಸುಮ)

ಸಂಪಾದಕ

ಕೆ. ಅಪ್ಪಣ್ಣಾಚಾರ್ಯ,
ಸ್ಪೆಷಲ್ ಆಫೀಸರ್, ದಾಸಸಾಹಿತ್ಯ ಪ್ರಾಜೆಕ್ಟ್,
ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.




ತಿರುಮಲೆ ತಿರುಪತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಗಳಾದ
**ಎಂ. ಕೆ. ಆರ್. ವಿನಾಯಕ್** ಐ.ಎ.ಎಸ್.
ಇವರ ಅನುಮತಿಯಿಂದ ಪ್ರಕಟಿಸಲ್ಪಟ್ಟಿದೆ.

**ತಿರುಮಲೆ ತಿರುಪತಿ ದೇವಸ್ಥಾನಗಳು**
**ತಿರುಪತಿ**

# SRIDAVITTHALA DASARA KRITHIGALU

Edited By :

**K. Appannacharya.**

T. T. D. Religious Publication Series No : 501

Copies : 3000

First Edition : 1997




Published By :

**M. K. R. VINAYAK** I.A.S.
Executive Officer,
T. T. Devasthanams,
Tirupati.




Printed at :

T. T. Devasthanams Press,
Tirupati.

# ಪರಿವಿಡಿ

# ಪ್ರಕಾಶಕರ ಮಾತು

ಭಗವಂತನ ಹಾಗೂ ಅವನ ಭಕ್ತರ ಅವತಾರಗಳು ಪ್ರಬಲಿದ ಅಧರ್ಮವನ್ನು ಬದಿಗೊತ್ತಿ ಧರ್ಮದ ಪುನರುದ್ಧಾರಕ್ಕಾಗಿ. ಕಡು ಕರುಣಾಮಯನಾದ ಭಗವಂತನು ಕಲಿಯುಗದಲ್ಲಿ ಜೀವರು ಧರ್ಮಮಾರ್ಗದಿಂದ ಚ್ಯುತರಾಗದಂತೆ ನಿರಂತರ ರಕ್ಷಿಸಲು ಭೂವೈಕುಂಠವೆನಿಸಿರುವ ವೆಂಕಟಾದ್ರಿಗೆ ಬಂದು ನೆಲಸಿರುವನು. ಧರ್ಮ ಸಂಸ್ಥಾಪಕನಾದ ಈ ಸ್ವಾಮಿಯ ಸೇವೆಯಿಂದ ತಮ್ಮ ಜನ್ಮವನ್ನು ಧನ್ಯಮಾಡಿಕೊಂಡು ಲೋಕವನ್ನು ಬೆಳಗಿದ ಪೂತಾತ್ಮರು ಅನೇಕರು. ಇವರಲ್ಲಿ ಕರ್ನಾಟಕ ಹರಿದಾಸರು ಸಹ ಸೇರುತ್ತಾರೆ.

ಎಲ್ಲ ಹರಿದಾಸರು ಶ್ರೀನಿವಾಸನನ್ನು ಮನಸಾರ ಕೊಂಡಾಡಿರುವರು. ವೇಂಕಟನ ಭೂವೈಕುಂಠ ದಾಸರೆಲ್ಲರಿಗೆ ತವರೂರು. ಶ್ರೀನಿವಾಸನ ಕರುಣಾ ಕಟಾಕ್ಷದಿಂದ ಹೊರಹೊಮ್ಮಿದ ಇವರ ಸಾಹಿತ್ಯ ಮಾಸಲಳಿಯದ ನಿತ್ಯನೂತನ ಸಜೀವ ವಿಶ್ವಸಾಹಿತ್ಯ. ಇವರ ಕೃತಿಗಳು ಶ್ರುತಿ ಸ್ಮೃತಿ ಪುರಾಣಗಳಿಗೆ ವ್ಯಾಖ್ಯಾನದಂತಿರುವವು. ಸಾಮಾನ್ಯ ಜನರಿಗೆ ತಿಳಿಯಲಸಾಧ್ಯವಾದ ಅನೇಕ ವೇದಾಂತರಹಸ್ಯಗಳನ್ನು ಇವರು ಕೃತಿಗಳ ರೂಪದಲ್ಲಿ ತಿಳಿಯ ಹೇಳಿರುವರು.

ಪ್ರಕೃತ ದಾಸವರೇಣ್ಯರಾದ ಶ್ರೀದವಿಠ್ಠಲದಾಸರ ಕೃತಿಗಳನ್ನೊಳಗೊಂಡ ಈ ಹೊತ್ತಿಗೆಯನ್ನು ಪ್ರಕಟಿಸುತ್ತಿದ್ದೇವೆ. ಸಹೃದಯರಾದ ಸಾಹಿತ್ಯಾಭಿಮಾನಿಗಳೂ, ಭಕ್ತರೂ ಈ ನಮ್ಮ ಉತ್ಸಾಹವನ್ನು ಇಮ್ಮಡಿ ಮಾಡುತ್ತಾ, ಈ ಕೃತಿಯನ್ನು ಆದರಿಸುವರೆಂದು ಆಶಿಸುತ್ತೇನೆ.

**ಎಂ. ಕೆ. ಆರ್. ವಿನಾಯಕ್,** ಐ.ಎ.ಎಸ್.
ತಿರುಮಲೆ ತಿರುಪತಿ ದೇವಸ್ಥಾನಗಳ
ಕಾರ್ಯನಿರ್ವಹಣಾಧಿಕಾರಿ,
ತಿರುಪತಿ.

# ಮುನ್ನುಡಿ

ಕನ್ನಡಸಾಹಿತ್ಯದ ದೊಕ್ಕಸ ಶಿವಶರಣರ ಹಾಗೂ ಹರಿದಾಸರ ಸಾಹಿತ್ಯದಿಂದ ಪೂರ್ಣವಾಗಿದೆ. ೧೩ನೇ ಶತಮಾನದಿಂದ ಅವ್ಯಾಹತವಾಗಿ ಸಾಗಿಬಂದ ಹರಿದಾಸ ಸಾಹಿತ್ಯವನ್ನು ಸ್ಥೂಲವಾಗಿ ಮೂರು ಹಂತಗಳಲ್ಲಿ ವಿಭಾಗಿಸಬಹುದು. ನರಹರಿತೀರ್ಥ ರಿಂದ ಕನಕದಾಸರವರೆಗೆ ಮೊದಲನೆಯ ಹಂತ. ಮಹಿಪತಿರಾಯರಿಂದ ಹಿಡಿದು ಜಗ ನ್ನಾಥದಾಸರ ವರೆಗೆ ಎರಡನೆಯ ಹಂತ. ಪ್ರಾಣೇಶದಾಸರಿಂದ ಸುಂದರವಿಠಲರವರೆಗೆ ಮೂರನೇ ಹಂತ. ಈ ಮೂರನೆಯ ಹಂತದಲ್ಲಿ ಬಾಳಿ ಬೆಳಗಿದ ನಂದಾದೀಪವೇ ಶ್ರೀದವಿಠಲದಾಸರು. ಶ್ರೀದವಿಠಲದಾಸರು ಜಗನ್ನಾಥದಾಸರ ಸಾಕ್ಷಾತ್ ಶಿಷ್ಯರು. ಜಗ ನ್ನಾಥದಾಸರಿಂದಲೇ ಅಂಕಿತನಾಮವನ್ನುಪಡೆದು, ದಾಸಸಾಹಿತ್ಯಕ್ಕೆ ವಿಶಿಷ್ಟ ಸೇವೆಯನ್ನು ಸಲ್ಲಿಸಿದರು. ಶ್ರೀದವಿಠಲದಾಸರ ಸಮಗ್ರಕೃತಿಗಳು ಇಂದು ದೊರೆಯುತ್ತಾ ಇಲ್ಲ. ಕೇವಲ ೭೩ ಕೃತಿಗಳು ಮಾತ್ರ ದೊರೆಯುತ್ತಲಿವೆ. ದೊರೆತ ಈ ಕೃತಿಗಳಲ್ಲಿ ನಾಲ್ಕು ವಿಭಾಗಗಳನ್ನು ಕಾಣಬಹುದು. ಅವು:---

೧. ಕೃಷ್ಣಲೀಲಾ ಪ್ರತಿಪಾದಕ ಪಧಗಳು.

೨. ರಾಮ ಮಹಿಮಾ ಪ್ರತಿಪಾದಕ ಪದಗಳು.

೩. ಇತರ ದೇವತೆಗಳಿಗೆ ಸಂಬಂಧಿಸಿದ ಪದಗಳು.

೪. ಪ್ರಬೋಧಾತ್ಮಕ ಪದಗಳು.

ಈ ಮೇಲ್ಕಂಡ ವಿಭಾಗಕ್ಕನುಗುಣವಾಗಿ ದೊರೆತ ಕೃತಿಗಳನ್ನು ಸಂಪಾದಿಸಿ ಪ್ರಕೃತ ಈ ಹೊತ್ತಿಗೆಯನ್ನು ಪ್ರಕಟಿಸುತ್ತಿದ್ದೇವೆ. ಈ ಸಂಪಾದನೆಯ ಕಾರ್ಯದಲ್ಲಿ ಪೂರ್ಣ ತಮ್ಮ ಸಹಕಾರ ನೀಡಿದವರು ಕೆ. ರಾಘವೇಂದ್ರರಾವ್ ವಕೀಲ್. ರಾಯಚೂರ್ ಇವರು. ಇವರಿಗೆ ನನ್ನ ಅನಂತಧನ್ಯವಾದಗಳು.

ಸಹೃದಯತೆಯಿಂದ ಅನತಿಕಾಲದಲ್ಲಿ ಪುಸ್ತಕ ಹೊರಬರುವಂತೆ ಪ್ರಸ್ ಸಿಬ್ಬಂದಿಗೆ ಆದೇಶನೀಡಿ ಸಹಕರಿಸಿದ ಲಕ್ಷ್ಮಣ್ ರಾವ್ (ಪ್ರೆಸ್ ಮೇನೇಜರ್ ತಿ.ತಿ. ದೇ.) ಇವರಿಗೆ ನನ್ನ ವಂದನೆಗಳು. ಕರಡಚ್ಚು ಪ್ರತಿಗಳನ್ನು ಶೋಧಿಸಿ ಪರಿಷ್ಕರಿಸುವಲ್ಲಿ ತಮ್ಮ ಪೂರ್ಣ ಸಹಕಾರವನ್ನು ನೀಡಿದ ಬಿ. ಎನ್. ಶ್ರೀನಿವಾಸನ್ (ಕನ್ನಡ ಸಬ್ ಎಡಿಟರ್) ಇವರಿಗೂ ನನ್ನ ಹೃದಯಪೂರ್ವಕ ವಂದನೆಗಳು.

ಈ ಎಲ್ಲಕ್ಕೂ ಮುಖ್ಯಕಾರಣೀಭೂತರಾಗಿ ಧರ್ಮ ಜಾಗೃತಿಗಾಗಿ ನಿರಂತರ
ಸುತ್ತಿರುವ ಶ್ರೀ ಎಂ. ಕೆ. ಆರ್. ವಿನಾಯಕ್ ಐ.ಎ.ಎಸ್. ತಿರುಮಲೆ ತಿ
ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿಗಳು ಇವರಿಗೆ ಬಿಚ್ಚುಮನಸ್ಸಿನಿಂದ ಧ
ಗಳನ್ನರ್ಪಿಸುತ್ತಿದ್ದೇನೆ.

ಕೆ. ಅಪ್ಪಣ್ಣಾಚಾ
ಸ್ಪೆಷಲ್ ಆಫೀ
ದಾಸಸಾಹಿತ್ಯ ಪ್ರಾ
ತಿ.ತಿ.ದೇವಸ್ಥಾನಗಳು, ತಿರ

-----------

# ಶ್ರೀದವಿಠಲದಾಸರ ಜೀವನ ಚರಿತ್ರೆ

"ಸತಾಂ ಪ್ರಸಂಗಾನ್ಮಮ ವೀರ್ಯಸಂಪದೋ
ಭವಂತಿ ಹೃತ್ಕರ್ಣರಸಾಯನಾಃ ಕಥಾಃ
ತಜ್ಜೋಷಣಾದಾಶ್ವಪವರ್ಗವರ್ತ್ಮನಿ
ಶ್ರದ್ಧಾವತೀ ಭಕ್ತಿರನುಕ್ರಮಿಷ್ಯತಿ"

ಇದು ಭಾಗವತಾಚಾರ್ಯರ ಅಮೃತವಾಣಿ. ಸಾಧು-ಸಜ್ಜನರ ಸಹವಾಸದ ಫಲವನ್ನು ಸ್ವತಃ ಭಗವಂತನೇ ಸಾರಿಹೇಳಿರುವನು. ಸಹವಾಸವೆಂದಮಾತ್ರಕ್ಕೆ ನಿರ್ದಿಷ್ಟವ್ಯಕ್ತಿಯು ಪಕ್ಕದಲ್ಲಿರುವಿಕೆ ಎಂದು ಮಾತ್ರ ಅರ್ಥವಲ್ಲ. ಸಹವಾಸವು ಮಾನಸಿಕ ಹಾಗೂ ಕಾಯಿಕವೆಂದು ಎರಡು ವಿಧ. ಕಾಯಿಕ ಸಹವಾಸಕ್ಕೆ ವ್ಯಕ್ತಿಯ ಅಸ್ತಿತ್ವ ಅತ್ಯಾವಸ್ಯಕ. ಆದರೆ ಮಾನಸಿಕ ಸಹವಾಸಕ್ಕೆ ಇವರ ಆವಶ್ಯಕತೆಯಿಲ್ಲ. ಕೀರ್ತಿಶೇಷರಾದ ವ್ಯಕ್ತಿಗಳೊಡನೆ ಸಹ ಮಾನಸಿಕವಾಗಿ ಸಹವಾಸವನ್ನು ಬೆಳೆಸಬಹುದು. ಮಹಿತಾತ್ಮರ ಸ್ಮರಣೆ, ಅವರ ಗುಣಗಾನ, ಕಥಾಶ್ರವಣಗಳು ಅವರೊಡನೆ ಸಹವಾಸಕ್ಕೆ ಸಮಾನವಾಗುವವು.

ಜ್ಞಾನಿಗಳ ಕಥೆ ಎಂದರೆ ಭಗವಂತನ ಕಥೆಯಾಗಿಯೇ ಇರುತ್ತದೆ. ಇದಕ್ಕೆ ಕಾರಣ ಜ್ಞಾನಿಗಳ ನಡೆನುಡಿಗಳೆಲ್ಲವೂ ಭಗವಂತನಿಗೆ ಸಂಬಂಧಿಸಿದವುಗಳಾಗಿರುತ್ತವೆ. ಇಂಥಾ ಜ್ಞಾನಿಗಳ ಕಥಾಪ್ರಸಂಗದಿಂದಕಿವಿಗಳಿಗೂ ಹೃದಯಕ್ಕೂಭಗವಂತನ ಕಥಾಮೃತದ ರಸದೌತಣವು ದೊರೆಯುವುದು. ಮೋಕ್ಷವನ್ನು ತಂದು ಕೊಡುವ ಭಕ್ತಿಯು ತಾನಾಗಿಯೇ ಬೆಳೆದು ನಿಲ್ಲುವುದು. ಅದಕ್ಕಾಗಿಯೇ ಮಾನ್ಯ ಮಾನವೀ ಜಗನ್ನಾಥದಾಸರು--

"ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ
ಸಂಗಸುಖವಿತ್ತು ಕಾಯೊ ಕರುಣಾಸಾಗರ"

ಎಂದು ಬೇಡಿರುವರು. ಜ್ಞಾನಿಗಳೊಡನೆ ನಾವು ಮಾಡುವ ಕಾಯಿಕ ಅಥವಾ ಮಾನಸಿಕಸಂಗ ನಮ್ಮ ಅನಿಷ್ಟವನ್ನು ಪರಿಹರಿಸಿ ಇಷ್ಟಾರ್ಥವನ್ನು ತಂದು ಕೊಡುವುದು. ಅದಕ್ಕಾಗಿಯೇ ಶ್ರೀ ಪ್ರಸನ್ನ ವೆಂಕಟ ದಾಸರು---

"ಸಂಗವಾಗಲಿ ಸಾಧುಸಂಗವಾಗಲಿ
ಸಂಗದಿಂದ ಲಿಂಗದೇಹ ಭಂಗವಾಗಲಿ"

ಎಂದು ಬೇಡುತ್ತಾ ಸಾಧುಸಜ್ಜನರ ಸಮಾಗಮ ಜೀವನಿಗಿರುವ ಮುಖ್ಯ ಅನಿಷ್ಟವೆನಿಸಿದ ಲಿಂಗಶರೀರದ ಭಂಗಕ್ಕೂ ಕಾರಣವಾಗುವುದೆಂದು ಸೂಚಿಸಿರುವರು. ಜಗನ್ನಾ

"ಕೆಂಡ ಕಾಣದೆ ಮುಟ್ಟಿದರು ಸರಿ
ಕಂಡು ಮುಟ್ಟಲು ದಹಿಸದಿಪ್ಪುದೆ
ಪುಂಡರೀಕದಳಾಯತಾಕ್ಷನ ವಿಮಲಪದಪದ್ಮ
ಬಂಡುಣಿಗಳೆಂದೆನಿಪ ಭಕುತರ
ಹಿಂಡು ನೋಡಿದಮಾತ್ರದಲಿ ತನು
ದಿಂಡುಗೆಡಹಿದ ನರನ ಪಾವನ ಮಾಳ್ಪರಾಕ್ಷಣದಿ
ಈ ನಿಮಿತ್ತ ಪುನಃ ಪುನಃ ಸು--
ಜ್ಞಾನಿಗಳ ಸಹವಾಸಮಾಡು ಕು--
ಮಾನವರ ಕೂಡಾಡದಿರು ಲೌಕಿಕಕೆ ಮರುಳಾಗಿ"

ಎಂದು ಹೇಳಿ ಜ್ಞಾನಿಗಳ ಸಹವಾಸದ ಫಲವನ್ನು ಮನದಟ್ಟಾಗುವಂತೆ ವರ್ಣಿಸಿರುವರು.

ಇಂಥಾ ಜಗನ್ನಾಥದಾಸರ ಸಂಗದಿಂದ, ಅವರ ಶಿಷ್ಯರಾದ ಶ್ರೀ ಪ್ರಾಣೇಶದಾಸರ ಒಂದೇ ಒಂದು ಕೃತಿಯಿಂದ, ಜನ್ಮವನ್ನೇ ಧನ್ಯಮಾಡಿಕೊಂಡ ಪೂತಾತ್ಮರು ಶ್ರೀದವಿಠಲ ದಾಸರು. ಇವರ ಸ್ಮರಣೆ ಜನ್ಮಧನ್ಯತೆಗೆ ಕಾರಣ.

ಧಾರವಾಡ ಪ್ರಾಂತಕ್ಕೆಸೇರಿದ ಗ್ರಾಮ ಕರ್ಜಗಿ. ವರದಾನದಿಯ ಸನ್ನಿಧಾನ, ಗ್ರಾಮವನ್ನು ಬಳಸಿನಿಂತ ನಿಸರ್ಗ - ಈ ಎರಡರಿಂದ ಗ್ರಾಮಕ್ಕೆ ತಾನಾಗಿಯೇ ಸೌಂದರ್ಯ ಪಾವಿತ್ರ್ಯಗಳು ಬಂದೊದಗಿದ್ದವು. ಗ್ರಾಮದಲ್ಲಿ ವೇದವೇದಾಂತಗಳಲ್ಲಿ ನಿಷ್ಣಾತರಾದ ಪಂಡಿತರೂ, ನಿತ್ಯಾಗ್ನಿಹೋತ್ರಿಗಳೂ, ಪ್ರವಚನಾಚಾರ್ಯರುಗಳೂ ಬಹಳವಾಗಿದ್ದರು. ಪ್ರತಿಮನೆಯಲ್ಲೂ ಸರಸ್ವತಿ ನಲಿಯುತ್ತಿದ್ದಳು. ದೂರದೇಶಗಳಿಂದ ಬರುವ ವಿದ್ಯಾರ್ಥಿಗಳಿಗೆ ಅಲ್ಲಿ ಆದರದ ಸ್ವಾಗತವಿತ್ತು. ಅನೇಕ ಪಂಡಿತರು, ವಿದ್ಯಾರ್ಥಿಗಳಿಗೆ ಅನ್ನಾದಿಗಳನ್ನು ಕೊಟ್ಟು ವಿದ್ಯಾದಾನವನ್ನು ಮಾಡುತ್ತಿದ್ದರು. ಪ್ರಾತಃಕಾಲದಲ್ಲಿ ಪ್ರತಿಮನೆಯಿಂದಲೂ ಸುಶ್ರಾವ್ಯವಾಗಿ ವೇದಘೋಷವು ಕೇಳಿ ಬರುತ್ತಿತ್ತು. ಇವೆಲ್ಲಕ್ಕೂ ಮಿಗಿಲಾಗಿ ಗ್ರಾಮ ಮಧ್ಯದಲ್ಲಿ ಭಕ್ತಬಂಧುವಾದ ವಿಠಲನ ಭವ್ಯಮಂದಿರ. ಶ್ರೀದವಿಠಲರು ಶ್ರೀವಿಠಲನನ್ನು ವರ್ಣಿಸುತ್ತಾ--

"ಶ್ರೀದವಿಠಲಾ ನಿಮ್ಮ ಸದ್ಗುಣ ವೇದಶಾಸ್ತ್ರದಲ್ಲಿ
ಶೋಧಿಸಿ ನೋಡುವ ಭೂದೇವರಿಗೊಲಿದಾದರಿಸಲು
ಬಂದ್ಯಾ ವಿಠಲಾ"

ಎಂದು ಹೇಳಿ ವ್ಯಾಜೋಕ್ತಿಯಿಂದ ಕರ್ಜಿಗಿಯ ನಿಜಸೌಂದರ್ಯವನ್ನು ವರ್ಣಿಸಿರುವರು. "ಸದ್ಗುಣ ವೇದಶಾಸ್ತ್ರದಲಿ ಶೋಧಿಸಿ ನೋಡುವ ಭೂದೇವರಿಗೊಲಿದು" ಎಂಬ ಈ ಪ್ರಯೋಗದಲ್ಲಿ ಅಂದಿನ ಕರ್ಜಿಗಿಯ ಭವ್ಯಸ್ವರೂಪವು ಅಡಗಿದೆ.

ಕ್ರಿ.ಶ. 1740 ಹಾಗೂ 50 ರ ಮಧ್ಯಕಾಲದಲ್ಲಿ ಕರ್ಜಿಗಿಯ ಕರ್ಣೀಕರ ಕುಟುಂಬದಲ್ಲಿ ದಾಸರ ಜನನವಾಯಿತೆಂದು ಹಿರಿಯರ ವಚನ. ತಂದೆ ತಾಯಿಗಳು ತಮ್ಮ ಮುದ್ದುಮಗನಿಗೆ 'ದಾಸಪ್ಪ' ಎಂದು ಹೆಸರಿಟ್ಟರು.

"ಚಿಕ್ಕತನದಲಿ ತಂದೆ ತಾಯಿಗಳು ಒಲಿದು ಪೆಸ--
ರಿಕ್ಕಿ ಕರೆದರು ನಿನ್ನ 'ದಾಸಪ್ಪ'ನೆಂದು"

ಎಂಬ ಈ ಜಗನ್ನಾಥದಾಸರ ವಚನವೇ ಇದಕ್ಕೆ ಸಾಕ್ಷಿಯಾಗಿದೆ. ದಾಸಪ್ಪನಿಗೆ ಅಣ್ಣತಮ್ಮಂದಿರಾಗಲಿ ಅಕ್ಕತಂಗಿಯರಾಗಲಿ ಇದ್ದಂತೆ ತಿಳಿದು ಬರುತ್ತಾ ಇಲ್ಲ. ಆನುವಂಶೀಕವಾಗಿ ಬಂದ ಕರಣೀಕವೃತ್ತಿ, ಹೊಲಮನೆಗಳಿಂದಾಗಿ ದಾಸಪ್ಪನಿಗೆ ಯಾವ ಕೊರತೆಯೂ ಇರಲಿಲ್ಲ. ಪಂಡಿತರ ನೆಲೆವೀಡಾದ ಕರ್ಜಿಗಿಯಲ್ಲಿ ಬೆಳೆದ ದಾಸಪ್ಪನಿಗೆ ಬಾಲ್ಯದಲ್ಲಿ ಯಥೋಚಿತವಾಗಿ ವಿದ್ಯಾಭ್ಯಾಸ ನಡೆಯಿತು. ಅದಾವ ಪ್ರಾರಬ್ಧದ ಬಲವೋ ಯುಕ್ತವಯಸ್ಸಿಗೆ ಬಂದ ದಾಸಪ್ಪ ಸ್ವೇಚ್ಛಾವಿಹಾರಿಯಾದ. ಇದೇ ಸಮಯಕ್ಕೆ ದಾಸಪ್ಪನ ತಂದೆ ತಾಯಿಗಳು ಸ್ವರ್ಗಸ್ಥರಾದರು. ಯಜಮಾನತನವು ದಾಸಪ್ಪನ ಹಸ್ತಗತವಾಯಿತು. ಯೌವನ ಅಧಿಕಾರ ಸಂಪತ್ತುಗಳು ಒಂದೆಡೆ ಸೇರಿದವು. ದಾಸಪ್ಪನನ್ನು ಹಿಡಿಯುವವರಾರು? ಯೌವನದ ಪ್ರಭಾವದಿಂದ ದಾಸಪ್ಪನು ವೇಶ್ಯಾಲೋಲುಪನಾದ.

ಲೋಕರೀತಿಯಂತೆ ದಾಸಪ್ಪನಿಗೆ ಸರಿಯಾದ ಸಮಯಕ್ಕೆ ವಿವಾಹವೂ ಆಯಿತು. ಸುಗುಣವತಿಯಾದ 'ಗುಂಡಮ್ಮ' ದಾಸಪ್ಪನ ಮಡದಿಯಾದಳು. ಮದುವೆಯಾದರೂ ದಾಸಪ್ಪನ ದಿನನಿತ್ಯದ ವ್ಯವಹಾರದಲ್ಲಿ ಯಾವ ವ್ಯತ್ಯಾಸವೂ ಉಂಟಾಗಲಿಲ್ಲ. ಪ್ರಾತಃಕಾಲದಲ್ಲಿ ಎದ್ದವನೇ ಸ್ನಾನಾಹ್ನೀಕಗಳನ್ನು ಮುಗಿಸಿಕೊಂಡು, ಕರ್ಣೀಕವೃತ್ತಿಯಕಡೆ ಸ್ವಲ್ಪ ಗಮನ ಕೊಟ್ಟು, ನಂತರ ಹೊಲಗಳಿಗೆ ಹೋಗಿ ಬರುತ್ತಿದ್ದನು. ಮಧ್ಯಾಹ್ನ ಊಟ ವಿಶ್ರಾಂತಿ. ಸಾಯಂಕಾಲವಾಯಿತೆಂದರೆ ಅಲಂಕರಿಸಿಕೊಂಡು ತಾಂಬೂಲವನ್ನು ಮೆಲ್ಲುತ್ತಾ ತನ್ನ ಮೆಚ್ಚಿನ ವೇಶ್ಯೆಯ ಮನೆಗೆ ಹೋಗುವುದು. ಮನಸ್ಸಿಗೆ ಬಂದಾಗ ರಾತ್ರಿ ಯಾವುದೋ ಒಂದು ಸಮಯದಲ್ಲಿ ಮನೆಗೆ ಬರುತ್ತಿದ್ದನು. ಸಾಧ್ವಿ ಗುಂಡಮ್ಮನಾದರೂ ದಾಸಪ್ಪನು ಬರುವವರೆವಿಗೂ ಕಾದಿದ್ದು ಬಂದಮೇಲೆ ಊಟ ಬಡಿಸಿ ತಾನು ಉಂಡು ಮಲಗುತ್ತಿದ್ದಳು. ದಾಸಪ್ಪನು ತಾನಾಗಿಯೇ ಆದರಿಸಿ ಕರೆದಲ್ಲಿ ಹತ್ತಿರ ಹೋಗುತ್ತಿದ್ದಳು. ಗುಂಡಮ್ಮ ಸಾರ್ಥಕನಾಮಧೇಯಳಾಗಿದ್ದಳು. ಸಹನವೇ ಅವಳ ಸಂಪತ್ತಾಗಿತ್ತು. ದಾಸಪ್ಪನು ತಾನೇ ಎಂದೂ ವಿಠಲನಮಂದಿರಕ್ಕೆ ಹೋದವನಲ್ಲ. ವಿಠಲ ಮಂದಿರದಲ್ಲಿ ಎಂದಾದರೂ ವಿಶೇಷಕಾರ್ಯಕ್ರಮವಿದ್ದಾಗ, ಊರಿನ ಜನರು ಬಂದು ಗೌರವದಿಂದ

ಆಹ್ವಾನಿಸಿದಾಗ ಮಾತ್ರ, ಅಧಿಕಾರವನ್ನು ಮುಂದೆ ಮಾಡಿಕೊಂಡು ಅಲ್ಲಿಗೆ ಹೋಗುತ್ತಿದ್ದನು. ಅಲ್ಲಾದರೂ ದೇವಾಲಯದ ಹೊರಪ್ರಾಕಾರದ [1] ಒಂದು ಸ್ತಂಭಕ್ಕೆ ಕುಳಿತುಕೊಂಡು, ಸ್ವಲ್ಪಹೊತ್ತಿದ್ದು ಹೊರಟು ಬರುತ್ತಿದ್ದನು. ಗರ್ಭಗುಡಿಯ ಹತ್ತಿರಕ್ಕೆ ಎಂದೂ ಹೋದವನಲ್ಲ.

ಇದೇ ಸಮಯದಲ್ಲಿ ವಿಜಯದಾಸರ ಪರಮಾನುಗ್ರಹಕ್ಕೆ ಪಾತ್ರರಾಗಿ, ಗೋಪಾಲದಾಸರಿಂದ ನಲವತ್ತು ವರ್ಷ ಆಯುಷ್ಯವನ್ನೂ, ಪಂಢರಪುರಾಧೀಶನಾದ ಪಾಂಡುರಂಗನಿಂದಲೇ "ಜಗನ್ನಾಥವಿಠಲ" ಎಂಬ ಅಂಕಿತವನ್ನೂ ಪಡೆದು ಪ್ರಸಿದ್ಧರಾದ ಜಗನ್ನಾಥದಾಸರು ಸಜ್ಜನರ ಉದ್ಧಾರಕ್ಕಾಗಿ ದೇಶಾಟನೆಯನ್ನು ಕೈಕೊಂಡಿದ್ದರು. ಜ್ಞಾನಿಗಳಲ್ಲಿ ಎರಡು ವಿಧ. ಕೇವಲ ತಮ್ಮ ಸಾಧನೆಗಾಗಿ ಭೂಲೋಕದಲ್ಲಿ ಹುಟ್ಟಿ, ತಮ್ಮ ನೈಜವನ್ನು ಯಾರಿಗೂ ತಿಳಿಯಗೊಡದೆ, ಸಾಧನೆ ಪೂರ್ತಿಯಾದೊಡನೆ ಇಹಲೋಕದ ಯಾತ್ರೆಯನ್ನು ಮುಗಿಸುವವರು ಕೆಲವರು. ಇನ್ನೂ ಕೆಲವರು ಶ್ರೀಹರಿಯ ಆಜ್ಞೆಯಂತೆ, ತಮ್ಮ ಸಾಧನೆಯನ್ನು ಮಾಡಿಕೊಳ್ಳುತ್ತಾ, ಅಜ್ಞಾನದಲ್ಲಿ ಮುಳುಗಿ ತಮ್ಮ ನೈಜವನ್ನರಿಯದೆ ತತ್ತರಿಸುತ್ತಿರುವ ಜೀವರನ್ನು ಉದ್ಧರಿಸುವರು. ಈ ಎರಡನೇ ಗುಂಪಿಗೆ ಸೇರಿದವರು ಶ್ರೀ ಜಗನ್ನಾಥದಾಸರು.

"ಫಲವಿದು ಬಾಳ್ದುದಕೆ ಶಿರಿ--
ನಿಲಯನ ಗುಣಗಳ ತಿಳಿದು ಭಜಿಸುವುದೇ"

ಎಂದು ಎಲ್ಲ ಸಾತ್ವಿಕ ಜನರ ಮನಮುಟ್ಟುವಂತೆ ಹಾಡುತ್ತಾ ಸಾಗಿದ ಮಹಿತಾತ್ಮರು. ಇವರ ಅಂತರಂಗಿಕ ಶಿಷ್ಯರು ಪ್ರಾಣೇಶದಾಸರು. ಪ್ರಾಣೇಶದಾಸರು ಲಿಂಗಸೂಗೂರಿನವರು. ಇವರ ನಿಜವಾದ ಹೆಸರು ಯೋಗೀಂದ್ರರಾಯರು ಎಂದು.

ಒಮ್ಮೆ ಗುರುಶಿಷ್ಯರಿಬ್ಬರೂ ಸೇರಿ ಸಂಚಾರ ಮಾಡುತ್ತಾ ಕರ್ಜಗಿಗೆ ಬಂದರು. ಉದ್ದೇಶಪೂರ್ವಕವಾಗಿಯೇ ಕರ್ಜಗಿಗೆ ಬಂದ ಜಗನ್ನಾಥದಾಸರು ನೇರವಾಗಿ ದಾಸಪ್ಪನ ಮನೆಗೆ ಹೋದರು. ದಾಸಪ್ಪನ ಮನೆಯಲ್ಲಿ ದಾಸರಿಗೆ ಆದರದ ಸ್ವಾಗತ ಲಭಿಸಿತು. ಸಾಧ್ವಿಗುಂಡಮ್ಮ ವಿನಮ್ರವಾಗಿ ದಾಸರ ಅಡಿಗಳಲ್ಲಿ ಶಿರಬಾಗಿದಳು. ದಾಸರು "ಮನೋವಾಂಛಾ ಸಿದ್ಧಿರಸ್ತು" ಎಂದು ಹರಿಸಿದರು. ಗುರುಗಳ ಹೃದಯವನ್ನು ಬಲ್ಲ ಪ್ರಾಣೇಶದಾಸರು 'ತಥಾಸ್ತು' ಎಂದರು. ಜಗನ್ನಾಥದಾಸರ ಬಗ್ಗೆ ಕೇಳಿ ತಿಳಿದಿದ್ದ ಗುಂಡಮ್ಮನಿಗೆ ದಾಸರ ಆವಾಣಿ ಬರಡಾದ ಭೂಮಿಯಲ್ಲಿ ಅಮೃತವೃಷ್ಟಿ ಕರೆದಂತಾಯಿತು. ಗುಂಡಮ್ಮನಿಗೆ ಆದ ಆನಂದಕ್ಕೆ ಎಣೆಯೇ ಇಲ್ಲ.

---

[1] ಈಗಲೂ ಈ ಸ್ತಂಭವನ್ನು ಕರ್ಜಗಿಯ ವಿಠಲದೇವಾಲಯದಲ್ಲಿ ನೋಡಬಹುದು. ಕರ್ಜಗಿ ವಾಸ್ತವ್ಯರಾದ ಶ್ರೀ ವಾದಿರಾಜಾಚಾರ್ಯಗುಡಿ ಮುಂತಾದವರು ಈ ವಿಷಯವನ್ನು ಹೇಳುತ್ತಾರೆ.

"ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾ--
ದಧರ್ಮಶೀಲಸ್ಯ ಸುದುಃಖಿತಸ್ಯ
ಅನುಗ್ರಹಾಯೈವ ಚರಂತಿ ನೂನಂ
ಭೂತಾನಿ ಭವ್ಯಾನಿ ಜನಾರ್ದನಸ್ಯ"

ಕಂಡ ಕಂಡಲ್ಲಿ ವಿಶ್ವರೂಪ ಕಾಣುವ ಭಾಗವತೋತ್ತಮರಿಗೆ ದೇಶಸಂಚಾರದಿಂದ ಆಗಬೇಕಾದ ಪ್ರಯೋಜನವಿಲ್ಲ. ಆದಾಗ್ಯೂ ಆತ್ಮೋದ್ಧಾರಕರಾದ ಜ್ಞಾನಿಗಳ ಸಹವಾಸ ದೊರೆಯದೆ, ಅಧರ್ಮನಿರತರಾಗಿ, ದುಃಖಪಡುತ್ತಾ, ಕೃಷ್ಣನಿಂದ ವಿಮುಖರಾದ ಸಾತ್ವಿಕ ಜನರ ಉದ್ಧಾರಕ್ಕಾಗಿಯೇ ಅವರು ಸಂಚಾರ ಮಾಡುತ್ತಾರೆ. ದಾಸಪ್ಪನ ಸೌಭಾಗ್ಯದ ಬಾಗಿಲು ತೆಗೆಯುವ ಸಮಯ ಪ್ರಾಪ್ತವಾಗಿತ್ತು; ಜಗನ್ನಾಥದಾಸರ ಆಗಮನವಾಯಿತು.

ಗುಂಡಮ್ಮ ಭಕ್ತಿ ವಿಶ್ವಾಸಗಳಿಂದ ದಾಸರ ಪೂಜೆಗೆ ಅಣಿಮಾಡಿದಳು. ಸ್ವತಃ ತಾನೇ ಶುಚಿರುಚಿಯಾದ ಅಡುಗೆಯನ್ನು ಮಾಡಿದಳು. ದಾಸಪ್ಪನಾದರೋ ಬಂದ ದಾಸರೊಡನೆ ಸ್ವಲ್ಪಮಾತನಾಡಿ, ದಾಸರಿಗೆ ಬೇಕಾದ ವ್ಯವಸ್ಥೆಯನ್ನು ಮಾಡುವಂತೆ ಗುಂಡಮ್ಮನಿಗೆ ಹೇಳಿ, ತನ್ನ ನಿತ್ಯಕಾರ್ಯಕ್ರಮದಂತೆ ಹೊಲಕ್ಕೆ ಹೊರಟು ಹೋದನು. ದಾಸರು ಗರುಡಾರೂಢ ಲಕ್ಷ್ಮೀನೃಸಿಂಹನನ್ನು ಪೂಜಿಸಿದರು. ಶ್ರದ್ಧೆಯಿಂದ ಗುಂಡಮ್ಮನು ಮಾಡಿದ ವಿವಿಧ ಪದಾರ್ಥಗಳನ್ನು ಸ್ವಾಮಿಗೆ ಸಮರ್ಪಿಸಿದರು. ಹೊಲದಿಂದ ಬಂದ ದಾಸಪ್ಪ ದಾಸರು ಕೊಟ್ಟ ತೀರ್ಥವನ್ನು ಸ್ವೀಕರಿಸಿ ದಾಸರನ್ನು ಊಟಕ್ಕೆ ಕೂಡಿಸಿ ತಾನೂ ಉಂಡ.

ಸಾಯಂಕಾಲವಾಗುತ್ತಿದ್ದಂತೆ ದಾಸಪ್ಪ ಅಲಂಕರಿಸಿಕೊಂಡು ವೇಶ್ಯೆಯ ಮನೆಗೆ ಹೊರಟುಹೋದ. ತನ್ನ ಸ್ವಾಮಿಗೆ ಸದ್ಬುದ್ಧಿಯನ್ನು ಕರುಣಿಸು ಎಂದು ಗುಂಡಮ್ಮ ಮನಸ್ಸಿನಲ್ಲೇ ಮಾಧವನಿಗೆ ಮೊರೆಯಿಟ್ಟಳು. ಊರಿನ ಕೆಲಗೃಹಸ್ಥರು ಬಂದು ವಿಠಲನ ಮಂದಿರದಲ್ಲಿ ಸತ್ಕಥಾಕಾಲಕ್ಷೇಪವನ್ನು ನಡೆಸಿಕೊಟ್ಟು ತಮ್ಮೆಲ್ಲರನ್ನೂ ಉದ್ಧರಿಸಬೇಕೆಂದು ದಾಸರನ್ನು ಪ್ರಾರ್ಥಿಸಿದರು. ದಾಸರು ಅದಕ್ಕೆ ತಮ್ಮ ಸಮ್ಮತಿಯನ್ನು ಸೂಚಿಸಿದರು. ದಾಸರು ವಿಠಲನ ಮಂದಿರಕ್ಕೆ ಹೊರಡುವುದಕ್ಕೆ ಮುಂಚೆ ಗುಂಡಮ್ಮನನ್ನು ಹತ್ತಿರಕ್ಕೆ ಕರೆದು "ಅಮ್ಮ ಈ ದಿನ ವಿಠಲನ ದೇವಾಲಯದಲ್ಲಿ ಪ್ರವಚನವಿದೆ. ನಿನ್ನ ಗಂಡನನ್ನು ಕರೆದುಕೊಂಡು ನೀನು ತಪ್ಪದೆ ಬರಬೇಕು." ಎಂದರು. ಗುಂಡಮ್ಮ ಕಣ್ಣೀರಿನಿಂದ ದಾಸರ ಪಾದ ತೊಳೆದು, ದಾಸರೇ, ನಾನು ಅಸ್ವತಂತ್ರಳು. ಈ ಕಾರ್ಯ ನನ್ನಿಂದಾಗುವುದೇ? ಎಂದಳು. ದಾಸರು ನಿಶ್ಚಯ ವಾಣಿಯಲ್ಲಿ "ಶ್ರೀಹರಿ ಸತ್ಯಸಂಕಲ್ಪನಮ್ಮ; ನಾವೆಲ್ಲಾ ನಿಮಿತ್ತಮಾತ್ರರು; ನೀನೇ ಹೋಗಿ ನಿನ್ನ ಪತಿಯನ್ನು ಕರೆದುಕೊಂಡು ಬಾ; ದಾಸಪ್ಪ ತಪ್ಪದೆ ಬರುತ್ತಾನೆ" ಎಂದರು. ದಾಸರ ಮಾತುಗಳು ಗುಂಡಮ್ಮನಿಗೆ ಎಲ್ಲಿಲ್ಲದ ಧೈರ್ಯವನ್ನು ತಂದು ಕೊಟ್ಟವು. "ನಿಮ್ಮ ಆಜ್ಞೆ" ಎಂದಳು.

"ಲೌಕಿಕಾನಾಂ ಹಿ ಸಾಧೂನಾಂ ಅರ್ಥಂ ವಾ
ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋ

ಭವಭೂತಿಮಹಾಕವಿಯ ಈ ಆರ್ಷವಾಣಿ ಸತ್ಯ. ಲೌ
ರ್ಥ್ಯದ ಇತಿಮಿತಿಗಳನ್ನು ತಿಳಿದು ಮಾತನಾಡುತ್ತಾರೆ. ಭಗ
ರಿಸಿದ ಜ್ಞಾನಿಗಳು ಆ ಭಕ್ತಬಂಧುವಿನ ಮೇಲೆ ಭಾರಹಾಕಿ
ರಾಡಿದ ನುಡಿಗಳಿಗನುಗುಣವಾಗಿ ಕಾರ್ಯಗಳು ತಾವಾಗಿ
ಭಗವಂತ ಆ ಮಹಿತಾತ್ಮರ ಮಾತುಗಳನ್ನು ಸತ್ಯವೆನಿಸುತ್
ಯಲು ಬಂದ ಗೃಹಸ್ಥರೊಂದಿಗೆ ಸೇರಿ ವಿಠಲನ ಮಂದಿರಕ್ಕೆ

ಸಂಜೆಯಾಯಿತು. ಗುಂಡಮ್ಮ ಮನೆಯಲ್ಲಿ ದೀಪ
ಯನ್ನು ಪೂಜಿಸಿ, ದೇವರನ್ನು ಮನಸಾರ ಪ್ರಾರ್ಥಿಸಿದಳು. "ಶ್ರೀ
ನಿಮಿತ್ತಮಾತ್ರರು; ನೀನೇ ಹೋಗಿ ನಿನ್ನ ಪತಿಯನ್ನು ಕರೆದುಕೊ
ಬರುತ್ತಾನೆ" ಎಂಬ ದಾಸರ ಮಾತುಗಳು ಗುಂಡಮ್ಮನ ಕಿವಿ
ದಂತಾಯಿತು. ದಾಸರನ್ನು ನೆನೆದ ಗುಂಡಮ್ಮ ತಲೆಯ ಮೇ
ದಾಸಪ್ಪನಿದ್ದ ಮನೆಗೆ ಹೊರಟಳು. ಮಾರ್ಗದಲ್ಲಿ, ಮನೆಯ
ಹೊರಬರದ ಗುಂಡಮ್ಮನನ್ನು ಕಂಡ ಜನರು ಆಶ್ಚರ್ಯದಿಂ
ರೆದರು. ತಗ್ಗಿಸಿದ ತಲೆಯನ್ನು ಎತ್ತದ ಗುಂಡಮ್ಮ ವೇಶ್ಯೆಯ
ಬಂದು ನಿಂತಳು. ಬಂದ ಗುಂಡಮ್ಮನನ್ನು ಕಂಡ ವೇಶ್ಯೆ ಭ
ನಿದ್ದಲ್ಲಿಗೆ ಓಡಿ ಬಂದು, "ಅಕ್ಕ ಬಂದಿದ್ದಾಳೆ" ಎಂದು ಹೇಳಿ
ಎಂದನು ದಾಸಪ್ಪ. "ಆ ತಾಯಿಯ ಹೆಸರನ್ನು ಉಚ್ಚರಿಸುವ
ಸಹಧರ್ಮಚಾರಿಣಿ ಬಂದಿದ್ದಾಳೆ" ಎಂದಳು ವೇಶ್ಯೆ. ಭಯಾ
ದಾಸಪ್ಪನನ್ನು ಮುತ್ತಿದವು. ದಿಗ್ಗನೆ ಮಂಚದಿಂದೆದ್ದು ಹೊ
ಗುಂಡಮ್ಮ ಬಂದ ದಾಸಪ್ಪನಿಗೆ ವಂದಿಸಿದಳು. "ನಾನೇ ಬರ
ಬಂದೆ?" ಎಂದನು ದಾಸಪ್ಪ. ಗುಂಡಮ್ಮನ ಕಂಠ ಗದ್ಗದಿ
ತುಂಬಿದವು; ತಲೆ ತಗ್ಗಿಸಿಕೊಂಡೇ "ನಿಮ್ಮಲ್ಲಿ ನಾನು ಎಂದು
ದಾಸರು ತಮ್ಮ ಪ್ರವಚನಕ್ಕೆ ನಿಮ್ಮನ್ನು ಕರೆತರುವಂತೆ ಆದೇಶಿ
ಮಾತ್ರ ತಾವು ವಿಠಲನ ಮಂದಿರಕ್ಕೆ ಬಂದರೆ ಸಾಕು" ಎಂದ
ಕರಗಿ ನೀರಾಗಿ ಕಣ್ಣಿನಿಂದ ಹೊರಬಂದಿತು. "ನಿಜ; ಇವಳು ತ
ಸಾಧ್ವಿ; ನನ್ನ ಸುಖಶಾಂತಿಗಳಿಗಾಗಿಯೇ ತನ್ನ ಜೀವನವನ್ನು
ಧೈರ್ಯದಿಂದ ಎಂದೂ ಮುಂದೆ ನಿಂತು ಮಾತನಾಡದ
ಸ್ಸಿಗೆ ಕಷ್ಟವಾಗಬಾರದು" ಎಂದುಕೊಂಡ ದಾಸಪ್ಪ, ನೀನು ನ
ಎಂದ. ಗುಂಡಮ್ಮನಿಗೆ ಶ್ರೀಹರಿಯೇ ಎಲ್ಲವನ್ನು ಮಾಡುತ್ತಿ

ದಾಸಪ್ಪನಿಗೆ ನಮಸ್ಕರಿಸಿ ಅಲ್ಲಿಂದ ನಡೆದಳು. ದಾಸಪ್ಪ ಮನೆಯೊಳಗೆ ಬಂದ. ಬಾಗಿಲ ಹಿಂದೆ ನಿಂತು ಕಣ್ಣೀರಿಡುತ್ತಿದ್ದ ವೇಶ್ಯೆಯನ್ನು ಕಂಡ. ಏನನ್ನೂ ಮಾತನಾಡದೆ "ಹೋಗಿ ಬರುತ್ತೇನೆ" ಎಂದು ಹೇಳಿದ. ಆ ಕ್ಷಣದಲ್ಲಿ ವೇಶ್ಯೆ ದಾಸಪ್ಪನ ಕೈಹಿಡಿದು "ಹೋಗುತ್ತೇನೆ ಎಂದು ಮಾತ್ರ ಹೇಳಿ; ಬರುವುದು ಬೇಡ; ಆ ಸಾಧ್ವಿಯ ಮನಸ್ಸಿಗೆ ನೋವಾಗುವುದು ಬೇಡ; ಇಲ್ಲಿಯವರೆವಿಗೆ ನಮ್ಮ ಪಾದಸೇವೆ ದೊರೆತದ್ದೇ ನನ್ನ ಜನ್ಮಾಂತರದ ಸುಕೃತ" ಎಂದಳು. ದಾಸಪ್ಪನು ಏನನ್ನೂ ಹೇಳದೆ ಅಲ್ಲಿಂದ ಹೊರಟುಹೋದ.

ಮನೆಗೆ ಬಂದ ದಾಸಪ್ಪ ಸ್ನಾನಮಾಡಿ ಮಡಿಯನ್ನುಟ್ಟು ಗುಂಡಮ್ಮನನ್ನು ಕರೆದುಕೊಂಡು ವಿಠಲನ ಮಂದಿರಕ್ಕೆ ಬಂದ. ಬಂದ ದಾಸಪ್ಪನನ್ನು ಕಂಡ ದಾಸರು ಆದರದಿಂದ ಹತ್ತಿರಕ್ಕೆ ಕರೆದರು. ಎಂದೂ ಗರ್ಭಗುಡಿಯ ಹತ್ತಿರಕ್ಕೆ ಹೋಗದ ದಾಸಪ್ಪ ದಾಸರ ಮಾತಿಗೆ ಸಮ್ಮೋಹಿತನಾಗಿ ದಾಸರ ಹತ್ತಿರಕ್ಕೆ ಬಂದು ನಮಸ್ಕರಿಸಿ ಕುಳಿತುಕೊಂಡ. ನೆರೆದ ಜನರಿಗೆಲ್ಲಾ ಆಶ್ಚರ್ಯವೇ! ಆಶ್ಚರ್ಯ!

ದಾಸರು ಪ್ರವಚನ ಪ್ರಾರಂಭ ಮಾಡುವುದಕ್ಕೆ ಮುಂಚೆ ಪ್ರಾಣೇಶದಾಸರ ಕಡೆ ನೋಡುತ್ತಾ "ಯೋಗಣ್ಣಾ! ನಿನ್ನಿಂದಲೇ ಕಾರ್ಯಕ್ರಮ ಪ್ರಾರಂಭವಾಗಲಿ" ಎಂದರು. "ವಿಜಯದಾಸರು ಗೋಪಾಲದಾಸರನ್ನು ಅನುಗ್ರಹಿಸಿದಂತೆ ಅನುಗ್ರಹಿಸಿದಿರಿ; ನಿಮ್ಮ ಆಜ್ಞೆ ಎಂದು ಹೇಳುತ್ತಾ ಪ್ರಾಣೇಶದಾಸರು--

ರಾಗ -- ಸೌರಾಷ್ಟ್ರ (ಪೂರ್ವಿ) ತಾಳ -- ಆದಿ

ಆದದ್ದಾಯ್ತಿನ್ನಾದರು ಒಳ್ಳೇ
ಹಾದಿ ಹಿಡಿಯೊ ಪ್ರಾಣೇ || ಪ ||

ಈ ದುರ್ನಡತಿಂಧ್ಯೋದರಿಹಪರದಿ
ಮೋದೆಂದಿಗು ಕಾಣೇ ಪ್ರಾಣೇ || ಅ.ಪ. ||

ನೆಲಾ ಸತೀ ಧನದೊಳಾನವರತ
ಹುಳಾಗಿರುವಿಯಲ್ಲೋ
ಹಲಾ ಪಿಡಿದು ವಿಧಿಕುಲಾಚರಣೆ ಬಿಡೆ
ಫಲಾತರುವರಲ್ಲೋ
ಸ್ಥಳಾಸ್ಥಳರಿಯದೆ ಕಲಾಪಮಾಡ್ಯಘ--
ಕೊಳಾಗುವದು ಸಲ್ಲೋ
ಎಲಾ ಕೇಳು ಒಂತಿಲಾಮಾತ್ರ ನೀ
ಗೆಲಾಹ ಬಗೆ ಇಲ್ಲೋ ಪ್ರಾಣೇ || ೧ ||

ಶಿಲಾದ ವಿಗ್ರಹ ಥಳಿಸಿ ಹರಿಯೊ
ಬ್ಯಲಾ ಕೇವಲಾ ಸುಳ್ಳೋ
ಚಲಾಪ್ರತಿಮೆ ಪದಗಳಾರ್ಚಿಸದಲೆ
ಮಲಾತಿನುತಿಪ್ಪಲ್ಲೋ
ಕಳಾಬಿಡದಿರೆ ಅನಿಳಾನ ಹರಿಮನಿ
ಮೊಳಾಗಿಹಾದಲ್ಲೋ
ನಳಾ ಭರತಮುಖ ಇಳಾಣ್ಮರಂದದಿ
ಭಲಾ ಎನಿಸಲಿಲ್ಲೋ ಪ್ರಾಣೀ ॥ ೨ ॥

ಬಿಲಾ ಸೇರಿ ತಲಿ ಕೆಳಾಗಿ ತಪಿಸಲು
ಫಲಾ ಲೇಶಿತಿಲ್ಲೋ
ಖಳಾರಿದಿನ ಬಿಂದುಜಲಾ ಕೊಳ್ಳೆನೆಂದು
ಛಲಾಮಾಡಲಿಲ್ಲೋ
ಬಲಾದರದಲಿಂತುಲಾದಿ ಸ್ನಾನ ಮೊ--
ದಲಾದ ವ್ರತವೆಲ್ಲೋ
ಬಲಾರಿನುತ ಪ್ರಾಣೇಶವಿಠಲನ
ಬಲಾ ಘಳಿಸಿಕೊಳ್ಳೋ ಪ್ರಾಣೀ ॥ ೩ ॥

ಎಂಬ ಕೀರ್ತನೆಯನ್ನು ಹಾಡಿ ಮುಗಿಸಿದರು. ಪ್ರಾಣೇಶದಾಸರ ಮುಖಕಮಲದಿಂದ ಹೊರಟ ಮಂತ್ರಸದೃಶವಾದ ಪ್ರತಿಶಬ್ದವೂ ದಾಸಪ್ಪನ ಹೃದಯವನ್ನು ಕದಡಿತು. ದಾಸಪ್ಪನಿಗೆ ಈ ಪ್ರಪಂಚದ ಪರಿವೆಯೇ ಇಲ್ಲದಂತಾಯಿತು. ಪಶ್ಚಾತ್ತಾಪದಿಂದ ದಾಸಪ್ಪನ ಹೃದಯ ಸ್ವಚ್ಛವಾಯಿತು.

ಅಪರಾಧಿ ನಾನಲ್ಲ ಪರಾಧವೆನಗಿಲ್ಲ
ಕಪಟನಾಟಕ ಸೂತ್ರಧಾರಿ ನೀನೇ ॥ ಪ ॥

ನೀನೆ ಆಡಿಸದಿರಲು ಜಡ ಒನಕೆಯ ಗೊಂಬೆ
ಏನು ಮಾಡಲು ಬಲ್ಲುದು ತಾನೆ ಬೇರೆ
ನೀನಿಟ್ಟ ಸೂತ್ರದಿಂ ಚಲಿಪವು ಕೈಕಾಲುಗಳು
ನೀನೆ ಮುಗ್ಗಿಸಲು ಮುಗ್ಗುವ ದೇಹದವನು ॥ ೧ ॥

ಒಂದೆಂಟುಬಾಗಿಲ ಪಟ್ಟಣಕ್ಕೆ ತನ್ನ
ದೆಂದು ಇಪ್ಪತ್ನಾಲ್ಕು ಮನೆಯಾಳ್ಗಳ

ತಂದು ಕಾವಲ ನಿಲಿಸಿ ಎನ್ನ ನೀ ಒಳಗಿಟ್ಟು
ಮುಂದೆ ಭವದಲಿ ಭವಣಿಪುದನ್ಯಾಯ || ೨ ||

ಯಂತ್ರವಾಹಕ ನೀನೆ ಒಳಗಿದ್ದು ಎನ್ನ ಸ್ವ--
ತಂತ್ರನೆಂದೆನಿಸಿ ಕೊಲಿಸುವರೆ ಹೇಳೋ
ಕಂತುಪಿತ ಲಕ್ಷ್ಮೀಶ ಎಂತಾದಡಂತಹುದಾ--
ನಂತಮೂರುತಿ ನಮ್ಮ ಪುರಂದರವಿಠಲ || ೩ ||

ಈ ಪುರಂದರದಾಸರ ಹಾಡನ್ನು ದಾಸಪ್ಪ ಮತ್ತೆ ಮತ್ತೆ ಮನಸ್ಸಿನಿಂದ ಹಾಡಿದ. ತನ್ನ ಅಸ್ವಾತಂತ್ರತೆಯನ್ನು ಚಿಂತಿಸುತ್ತಾ, ಸರ್ವತಂತ್ರಸ್ವತಂತ್ರನಾದ ಶ್ರೀಹರಿಯ ಪಾದಾರವಿಂದಗಳಲ್ಲಿ ಅಂದಿನವರೆವಿಗೂ ತಾನು ಮಾಡಿದ ಎಲ್ಲ ಕರ್ಮಗಳನ್ನು ಸಮರ್ಪಿಸಿ ನಿರ್ಲಿಪ್ತನಾದ. ಆ ಕ್ಷಣದಲ್ಲಿ ದಾಸಪ್ಪನ ಮೈರೋಮಾಂಚಿರವಾಯ್ತು. ದಿಗ್ಗನೆ ಎದ್ದು ಜಗನ್ನಾಥ ದಾಸರ ಅಡಿದಾವರೆಗಳಿಗೆ ವಂದಿಸಿ "ನನ್ನನ್ನು ಉದ್ಧರಿಸಬೇಕೆಂದು" ಬೇಡಿದ. ದಾಸರು ಆನಂದದಿಂದ "ಶ್ರೀಹರೀ! ಸುಜೀವಿಯನ್ನು ಉದ್ಧರಿಸಿದೆ. ಮಣ್ಣಿನಲ್ಲಿ ಬಿದ್ದ ಮಾಣಿಕ್ಯವನ್ನು ಶುದ್ಧಗೊಳಿಸಿ ನಿನ್ನ ಪಾದಗಳಿಗೆ ಅಲಂಕರಿಸಿಕೊಂಡೆ" ಎಂದು ನೆನೆಯುತ್ತಾ ತಮ್ಮ ಅಮೃತ ಹಸ್ತದಿಂದ ದಾಸಪ್ಪನ ಬೆನ್ನನ್ನು ಸವರಿದರು. ದಾಸಪ್ಪನಿಗೆ ತಾನು ಸಕಲ ಪಾಪಗಳಿಂದ ನಿರ್ಮುಕ್ತನಾದವನಂತೆ ಭಾಸವಾಯಿತು. ಎಂದೂ ಕಾಣದ ಅತಿವಿಚಿತ್ರವಾದ ಆನಂದವನ್ನು ಆಕ್ಷಣದಲ್ಲಿ ದಾಸಪ್ಪ ಅನುಭವಿಸಿದ. ಗುಂಡಮ್ಮನ ಆನಂದಕ್ಕೆ ಪಾರವೇ ಇಲ್ಲದಂತಾಯಿತು.

ಮರುದಿನ ಪ್ರಾತಃಕಾಲಕ್ಕೆ ಕಾಯಿಕವಾಗಿಯೂ, ಮಾನಸಿಕವಾಗಿಯೂ ಪರಿಶುದ್ಧನಾದ ದಾಸಪ್ಪನಿಗೆ ಜಗನ್ನಾಥದಾಸರು ದಾಸದೀಕ್ಷೆಯನ್ನು ಕೊಟ್ಟರು. "ಶ್ರೀದವಿಠಲ" ಎಂಬ ಅಂಕಿತ ನಾಮವನ್ನು ಕರುಣಿಸುತ್ತಾ--

ರಾಗ -- ಕಾಂಬೋಧಿ ತಾಳ -- ಝುಂಪೆ

ಶ್ರೀದವಿಠಲ ಸರ್ವರಂತರಾತ್ಮಾ
ನೀದಯದಿ ಒಲಿದು ನಿತ್ಯದಲಿ ಕಾಪಾಡುವುದು || ಪ ||

ಚಿಕ್ಕತನದಲಿ ತಂದೆತಾಯಿಗಳು ಒಲಿದು ಪೆಸೆ
ರಿಕ್ಕಿ ಕರೆದರು ನಿನ್ನ ದಾಸನೆಂದೂ
ಅಕ್ಕರದಿ ಒಲಿದು ಭವದುಃಖಗಳ ಪರಿಹರಿಸಿ
ಮಕ್ಕಳನು ತಾಯ್ಸಲಹುವ ತೆರದಿ ಸಂತೈಸು || ೧ ||

ಸುಕನಯ್ಯ ನಿನ್ನ ಪದಭಕುತಿ ತ್ವತ್ಕಥಾಶಾಸ್ತ್ರ
ಯುಕುತಿವಂತರ ಸಂಗಸುಖವನಿತ್ತು

ಸಕಲ ಕರ್ಮಗಳ ವೈದಿಕವೆನಿಸು ಒಲಿದು ದೇ--
ವಕಿತನಯ ನಿನ್ನವರ ಮುಖದಿಂದ ಪ್ರತಿದಿನದಿ || ೨ ||

ಮಾತರಿಶ್ವಪ್ರಿಯ ಸುರೇತರಾಂತಕನೆ ಪುರು--
ಹೂತನಂದನಸಖ ನಿರಾತಂಕದಿ
ನೀ ತೋರು ಮನದಿ ಸಂಪ್ರೀತಿಯಿಂದಲಿ ಒಲಿದು
ಹೋತಾಹ್ವ ಗುರು ಜಗನ್ನಾಥವಿಠಲ ಬಂಧು || ೩ ||

ಎಂಬ ಹಾಡನ್ನು ಹಾಡಿದರು. "ಆತ್ಮಬಂಧುವಾದ ಶ್ರೀಜಗನನಾಥವಿಠಲಾ ನೀನೇ ಗುರುವಾಗಿ ಈ ದಾಸಪ್ಪನನ್ನು ಕರುಣಿಸಿ ಉದ್ಧರಿಸು" ಎಂದು ಭಗವಂತನಲ್ಲಿ ಪ್ರಾರ್ಥಿಸಿ ದಾಸಪ್ಪನನ್ನು ಹರಿಸಿದರು. ದಾಸಪ್ಪನಿಗೆ ಹೊಸಜನ್ಮವೇ ಬಂದಂತಾಯಿತು. ದಾಸಪ್ಪ ಪ್ರಾಣೇಶದಾಸರಂತೆ ಜಗನ್ನಾಥದಾಸರ ಮೆಚ್ಚಿನ ಶಿಷ್ಯನಾದ. ಜಗನ್ನಾಥದಾಸರ ಪೂರ್ಣ ಅನುಗ್ರಹವು ದಾಸಪ್ಪನ ಮೇಲಾಯಿತು. ದಾಸಪ್ಪ 'ಶ್ರೀದವಿಠಲದಾಸರೆಂದು' 'ಕರ್ಜಿಗಿ ದಾಸರೆಂತಲೂ' ಪ್ರಸಿದ್ಧನಾದ. ಜಗನ್ನಾಥದಾಸರ ಮೇರುಕೃತಿ ಎನಿಸಿದ ಹರಿಕಥಾಮೃತಸಾರಕ್ಕೆ ಫಲಸ್ತುತಿಯನ್ನು ಬರೆಯುವ ಭಾಗ್ಯ ಶ್ರೀದವಿಠಲದಾಸರಿಗೆ ದೊರೆಯಿತು. ಶ್ರೀದವಿಠಲದಾಸರು ತಮ್ಮ ಹೆಚ್ಚಿನ ಸಮಯವನ್ನು ಶ್ರೀವಿಠಲನ ದೇವಾಲಯದಲ್ಲೇ ಕಳೆಯುತ್ತಿದ್ದರು. ಸ್ವಾಮಿಯ ಸನ್ನಿಧಾನದಲ್ಲಿ ಗಾನಮಾಡುತ್ತಾ ಮೈಮರೆತು ಕುಣಿಯುತ್ತಿದ್ದರು. ನರ್ತನ ಸೇವೆಯಾದ ಮೇಲೆ ಸ್ವಾಮಿಯ ಸನ್ನಿಧಾನದಲ್ಲಿರುವ [2] ಒಂದು ಸ್ಥಂಭಕ್ಕೆ ಒರಗಿ ಕುಳಿತುಕೊಳ್ಳುತ್ತಿದ್ದರು.

ಮುಂದೆ ಕಾಲಾಂತರದಲ್ಲಿ ಮುರಳಿಕೃಷ್ಣ ಹಾಗೂ ಸೀತಾಸಮೇತನಾದ ಶ್ರೀರಾಮಚಂದ್ರದೇವನು [3] ವಿಗ್ರಹರೂಪದಲ್ಲಿ ಶ್ರೀದವಿಠಲರ ಬಳಿಗೆ ಬಂದು ಸೇರಿದನು.

ದಾಸರು ಏಕಾಶಿಯ ರಾತ್ರಿಯಲ್ಲಿ ಜಾಗರಣೆಯನ್ನು ಮಾಡುತ್ತಾ ಶ್ರೀಕೃಷ್ಣನನ್ನು ತೊಟ್ಟಿಲಲ್ಲಿ ಕೂಡಿಸಿ ನರ್ತನ ಸೇವೆ ಮಾಡುತ್ತಾ--

"ಕೊಳಲೂದೊ ಇನ್ನೊಮ್ಮೆ ಕೃಷ್ಣಯ್ಯ
ಕೊಳಲೂದೋ ಮತ್ತೊಮ್ಮೆ ಕೃಷ್ಣಯ್ಯ
ಕೊಳಲೂದೋ ದ್ವಾರಕನಿಲಯನೆ"

---

[2] ಈ ಸ್ಥಂಭವನ್ನು ಕರ್ಜಿಗಿಯುಲ್ಲಿರುವ ಶ್ರೀವಿಠಲನ ಮಂದಿರದಲ್ಲಿ ಇಂದಿಗೂ ನಾವು ನೋಡಬಹುದು.

[3] ರಾಮ, ಸೀತಾ, ಮುರಳೀಕೃಷ್ಣ ಈ ಮೂರು ವಿಗ್ರಹಗಳು ಶ್ರೀದವಿಠಲದಾಸರಿಗೆ ಹೇಗೆ ದೊರೆತವು ಎನ್ನುವುದು ತಿಳಿಯುತ್ತಾ ಇಲ್ಲ. ಶ್ರೀರಾಮನ ವಿಗ್ರಹ ಆರು ಇಂಚು, ಸೀತೆಯ ವಿಗ್ರಹ ಐದು ಇಂಚು, ಕೃಷ್ಣನ ವಿಗ್ರಹ ಐದು ಇಂಚು ಎತರವಿದು ಬಹಳ ಸುಂದರವಾಗಿವೆ.

ಎಂಬ ಹಾಡನ್ನು ಮೈಮರೆತು ಹೇಳುತ್ತಿದ್ದರು. ಆಗ ನಾದಮೂರುತಿಯೂ, ಗೋಪೀ ಜನಲೋಲನೂ, ಭಕ್ತರಾಧೀನನೂ ಆದ ಸ್ವಾಮಿಯು ತನ್ನ ಎಡಹೆಗಲಲ್ಲಿ ಎಡಗಲ್ಲವನ್ನಿಟ್ಟು, ಕುಡಿಹುಬ್ಬುಗಳನ್ನು ನಾದಕ್ಕನುಗುಣವಾಗಿ ಆಡಿಸುತ್ತಾ, ಮೃದುವಾದ ತುದಿಬೆರಳುಗಳಿಂದ ವೇಣುವಿನ ರಂಧ್ರಗಳನ್ನು ಒತ್ತುತ್ತಾ ಆ ವೇಣುವನ್ನು ತನ್ನ ಮಧುರವಾದ ಅಧರದಲ್ಲಿಟ್ಟು ನುಡಿಸುತ್ತಿದ್ದನಂತೆ.

ಮುಂದೆ ಕೆಲವು ಕಾಲದ ಮೇಲೆ ಸಾಧ್ವಿಗುಂಡಮ್ಮ ಕಾಲನಾಮಕ ಪರಮಾತ್ಮನ ಇಚ್ಛೆಯಂತೆ ಇಹಲೋಕದ ಯಾತ್ರೆಯನ್ನು ಮುಗಿಸಿದಳು. ದಾಸರ ವಂಶ ಬೆಳೆದಿರಲಿಲ್ಲ. ಸಕಲ ಭೋಗಭಾಗ್ಯಗಳನ್ನೂ ತ್ಯಜಿಸಿ ನಿರಂತರ ಭಗವದ್ಧ್ಯಾನದಲ್ಲೇ ಕಾಲಕಳೆಯುತ್ತಿದ್ದ ದಾಸರ ಹತ್ತಿರಕ್ಕೆ ಯಾವ ಬಂಧುಗಳೂ ಬರುತ್ತಿರಲಿಲ್ಲ.ದಾಸರ ನಿಜವಾದ ಬಂಧುಗಳೆಂದರೆ ಹರಿದಾಸರೇ ಆಗಿದ್ದರು. ಗುಂಡಮ್ಮನೊಡನೆ ಸಾಧನೆಯ ಮಾರ್ಗದಲ್ಲಿ ಸಾಗಿದ ದಾಸರು ಈಗ ಆ ಸಾಧನ ಮಾರ್ಗದಲ್ಲಿ ಒಂಟಿಗರಾದರು. ಸಂಸಾರದಲ್ಲಿ ಮುಳುಗಿದ ತಮ್ಮನ್ನು ಜಗನನಾಥದಾಸರ ದ್ವಾರಾ ಮೇಲೆತ್ತಿ ಭೀತಿಯನ್ನು ಪರಿಹರಿಸಿದ ಆ ಭಗವಂತನ ಕಾರುಣ್ಯವನ್ನು ಸ್ಮರಿಸುತ್ತಾ, ತಮ್ಮ ಈ ಅನುಭವವನ್ನೇ ಸಂದೇಶರೂಪದಲ್ಲಿ "ಅಂಜಬ್ಯಾಡ ಬ್ಯಾಡೆಲೊ ಜೀವ -- ಭವಭಂಜನ ಹರಿ ಶರಣರ ಕಾವ" ಎಂದು ಹಾಡಿ ಸಕಲ ಜೀವಿಗಳಿಗೆ ಆಶ್ವಾಸನೆಯನ್ನು ನೀಡಿದರು.

ದಾಸರು ತಮ್ಮ 80ನೇ ವಯಸ್ಸಿನಲ್ಲಿ (ಕ್ರಿ.ಶ. 1820 ರ ಪ್ರಾಂತದಲ್ಲಿ) ಇಹಲೋಕದ ಯಾತ್ರೆಯನ್ನು ಮುಗಿಸಿದನು. ಭಗವಂತನ ಕರೆಯನ್ನು ತಿಳಿದ ದಾಸರು ಒಂದು ಶುಭಮುಹೂರ್ತದಲ್ಲಿ ತಮ್ಮ ಆರಾಧ್ಯಮೂರ್ತಿಗಳಾದ ಶ್ರೀರಾಮ ಸೀತಾ ಕೃಷ್ಣನ ವಿಗ್ರಹಗಳನ್ನು ಒಂದು ಪೆಟ್ಟಿಗೆಯಲ್ಲಿಟ್ಟು ತಮ್ಮ ಮನೆಯ ಒಂದು ಗೋಡೆಯಲ್ಲಿ ಆ ಪೆಟ್ಟಿಗೆಯನ್ನು ಮುಚ್ಚಿಟ್ಟರು. [4] ಸ್ವತಃ ತಾವೇ ದರ್ಭಾಸನವನ್ನು ಹಾಕಿಕೊಂಡು ಲಯಚಿಂತನೆಯನ್ನು ಮಾಡುತ್ತಾ ಊರ್ಧ್ವಲೋಕದತ್ತ ಪ್ರಯಾಣ ಬೆಳೆಸಿದರು. ದಾಸರು ವೈಕುಂಠ ಯಾತ್ರೆ ಮಾಡಿದ ಸಂಗತಿ ತಿಳಿದ ಊರಿನ ಜನರು ಮಹಿತಾತ್ಮರ ಸಂಗ ಇನ್ನು ಮುಂದೆ ನಮಗೆ ಇಲ್ಲದಂತಾಯಿತಲ್ಲಾ ಎಂದು ಮರುಗಿದರು. ಪೂತಾತ್ಮರಾದ ದಾಸರ ಭೌತಿಕದೇಹದ ಸಂಸ್ಕಾರ ಕಾರ್ಯಕ್ರಮವೇ ಒಂದು ಯಜ್ಞ ಎಂಬ ಭಾವನೆಯಿಂದ ಊರಿನ ಜನರೆಲ್ಲರೂ ದಾಸರ ಮನೆಯ ಮುಂದೆ ಸೇರಿದರು. ಮುಂದಿನ ಕಾರ್ಯಕ್ರಮಕ್ಕೆ ಸಿದ್ಧತೆಗಳನ್ನೂ ನಡೆಸಿದರು. ಅದೇ ಸಮಯಕ್ಕೆ ಒಳ್ಳೇ ತೇಜಸ್ವಿಗಳಾದ ನಾಲ್ಕುಜನ ಬ್ರಾಹ್ಮಣರು

---

[4] ಮುಂದೆ ಗೋಪಾಲದಾಸರ ಪರಂಪರೆಗೆ ಸೇರಿದ ಶ್ರೀ ಗುರುಜಗನ್ನಾಥದಾಸರು (ಕೋಶಿಗಿ ಸ್ವಾಮಿರಾಯಾಚಾರ್ಯರು) ಕರ್ಜಗಿಗೆ ಬಂದು ಅದೇ ಮನೆಯಲ್ಲಿ ಇಳಿದುಕೊಂಡು ಗೋಡೆಯಲ್ಲಿ ಅಡಗಿಸಿಟ್ಟ ದೇವರ ಪೆಟ್ಟಿಗೆಯನ್ನು ಹೊರತೆಗೆಯಿಸಿ ಅದರಲ್ಲಿರುವ ರಾಮ ಸೀತಾ ಕೃಷ್ಣರ ವಿಗ್ರಹಗಳನ್ನು ತೆಗೆದುಕೊಂಡು ಹೋದರು. ಇವರೇ ಹಿಂದಿನ ಜನ್ಮದಲ್ಲಿ ಶ್ರೀದವಿಠಲದಾಸರು ಎಂದು ಜ್ಞಾನಿಗಳ ವಚನ. ಆ ವಿಗ್ರಹಗಳು ಇಂದಿಗೂ ಗುರುಜಗನ್ನಾಥದಾಸರ ವಂಶೀಕರ ಮನೆಯಲ್ಲಿ ನಿತ್ಯ ಪೂಜೆಗೊಳ್ಳುತ್ತಲಿವೆ.

ಅಲ್ಲಿಗೆ ಬಂದು ತಾವು ದಾಸರ ಸಂಬಂಧಿಗಳೆಂದು ತಿಳಿಸಿದರು. ಸ್ವತಃ ತಾವೇ ಅಂತ್ಯಕ್ರಿಯೆಗಳಿಗೆ ಸಂಬಂಧಿಸಿದ ಎಲ್ಲ ಕಾರ್ಯಗಳನ್ನು ವೇದೋಕ್ತವಿಧಾನದಿಂದ ಮಾಡಿದರು. ಪರಮ ಪವಿತ್ರರಾದ ದಾಸರ ಭೌತಿಕ ದೇಹವನ್ನು ವರದಾನದಿಯ ತೀರದಲ್ಲಿ ಅಗ್ನ್ಯಂತರ್ಗತ ಪರಶುರಾಮನಿಗೆ ಸಮರ್ಪಿಸಿ ಎಲ್ಲರೂ ನೋಡುತ್ತಿದ್ದಂತೆ ವರದಾನದಿಯಲ್ಲಿ ಮುಳುಗಿ ಅದೃಶ್ಯರಾದರು. ಆ ಬಂದ ನಾಲ್ವರು ಯಾರು ಎಂದು ಯಾರಿಗೂ ತಿಳಿಯದಾಯಿತು. "ತಾವು ದಾಸರ ಸಂಬಂಧಿಗಳೆಂದು" ಆ ತೇಜಸ್ವಿಗಳಾಡಿದ ಮಾತು ಮಾತ್ರ ಎಲ್ಲರ ಮನಸ್ಸಿನಲ್ಲೂ ಆನಂದವನ್ನುಂಟುಮಾಡಿತು.

"ಪತಿಸುತಾನ್ವಯ ಭ್ರಾತೃ ಬಾಂಧವಾನ್
ಅತಿವಿಲಂಘ್ಯತೇ ಹ್ಯಚ್ಯುತಾಗತಾಃ"

ಎಂಬ ಗೋಪಿಕೆಯರ ಮಾತು ಮನನೀಯವಾಗಿದೆ. ದೇಹ ಸಂಬಂಧದಿಂದ ಬಂಧುತ್ವವನ್ನು ತಳೆದು ಮುಂದೆ ಚ್ಯುತರಾಗುವ ಬಂಧುಗಳಿಗಿಂತ ಅಚ್ಯುತನು ನಿಜವಾದ ಆತ್ಮಬಂಧು. ಭಗವಂತನನ್ನೇ ಆತ್ಮಬಂಧುವಾಗಿ ಪಡೆದ ಜ್ಞಾನಿಗಳಿಗೆ ಬಂಧುಗಳ ಕೊರತೆಯೇ. ಅಶಾಶ್ವತರಾದ ತಂದೆ, ತಾಯಿ, ಅಣ್ಣ, ತಮ್ಮ ಅಕ್ಕ ತಂಗಿ, ಅತ್ತೆ, ಮಾವ ಮುಂತಾದ ಬಂಧು ಬಾಂಧವರಿಂದ ತುಂಬಿದ ಈ ಲೌಕಿಕ ಸಂಸಾರ ನಿಜವಾದ ಸಂಸಾರವಲ್ಲ. ನಿಜವಾದ ಸಂಸಾರ ಹರಿದಾಸರದೆ. ಅದಕ್ಕಾಗಿಯೇ ಪುರಂದರ ದಾಸರು ತಮ್ಮ ನಿಜವಾದ, ಶಾಶ್ವತವಾದ ಸಂಸಾರದ ಸೌಂದರ್ಯವನ್ನು ಸಾರಿ ಹೇಳುತ್ತಾ--

ಸಂಸಾರವೆಂಬಂಥ ಭಾಗ್ಯವಿರಲಿ || ಪ ||

ಕಂಸಾರಿ ನೆನೆವೆಂಬ ಸೌಭಾಗ್ಯವಿರಲಿ || ಅ.ಪ. ||

ತಂದೆ ನೀನೇ ಕೃಷ್ಣ ತಾಯಿ ಇಂದಿರೆದೇವಿ
ಪೊಂದಿದ ಅಣ್ಣನು ವನಜ ಸಂಭವನು
ಇಂದುಮುಖಿ ಸರಸ್ವತಿದೇವಿಯೇ ಅತ್ತಿಗೆಯು
ಎಂದೆಂದಿಗೂ ವಾಯುದೇವರೇ ಗುರುವು || ೧ ||

ಭಾರತೀದೇವಿಯೇ ಗುರುಪತ್ನಿಯು ಎನಗೆ
ಗರುಡ ಶೇಷಾದಿಗಳೇ ಗುರುಪುತ್ರರು
ಹರಿದಾಸರೆಂಬುವರೆ ಇಷ್ಟಬಾಂಧವರೆನಗೆ
ಹರಿಭಜನೆ ನಡೆಯುತಿಹ ಸ್ಥಳವೆ ಮಂದಿರವು || ೨ ||

ಸರ್ವಾಭಿಮಾನವನು ತ್ಯಜಿಸುವುದೆ ಸುಸ್ನಾನ
ಹರಿಯ ನಾಮವೆ ಇನ್ನು ಅಮೃತಪಾನ

ವರದ ಪುರಂದರ ವಿಠಲ ನಿನ್ನ ಪಾದಧ್ಯಾನ
ಕರುಣಿಸೀ ಅನವರತ ಕರಪಿಡಿದು ಕಾಯೋ

ಎಂದು ಹೇಳಿರುವರು.

ಶ್ರೀ ಕರ್ಜಿಗಿ ದಾಸಾಂತರ್ಗತ ಭಾರತೀರಮಣ ಮುಖ್ಯ
ಪ್ರಾಣಾಂತರ್ಗತ ಶ್ರೀ ಶ್ರೀದವಿಠಲಾರ್ಪಣಮಸ್ತು.

**ಕೆ. ಅಪ್ಪಣ್ಣಾಚ**

# ಶ್ರೀದವಿಠಲದಾಸರ ಸ್ತೋತ್ರ

ರಾಗ -- ಮೋಹನಕಲ್ಯಾಣಿ ತಾಳ -- ತ್ರಿವಿಡಿ

ಶ್ರೀದವಿಠಲ ದಾಸರಾಯಾ ಎನ್ನ
ಬಾಧೆ ಮೂರು ಕಳೆ ಕರಜಗಿನಿಲಯ || ಪ ||
ಮೋದಮತದ ತತ್ವಸಾರವನ್ನು
ಬೋಧಿಸಿ ನಿರುತ ಪಿಡಿಯೆನ್ನ ಕೈಯ್ಯ || ಅ.ಪ. ||
ಪಿತಭ್ರಾತೃವೆಂದೆನಿಸಿ ನೀನು ಮತ್ತೆ
ಅತಿಭಕ್ತಿಯಲಿ ಗುರುರಾಜರೊಲಿಸಿ
ಮತಿಯಿಂದ ಸ್ತೋತ್ರವಗೈದು ಅವರ
ಹಿತವಚನವ ಕೇಳಿ ಹರ್ಷವಗೊಂಡೆ || ೧ ||
ಕರಜಗಿಗ್ರಾಮದಲಿ ಬಂದೆ ಅಲ್ಲಿ
ಹಿರಿದಾದ ವೈಭೋಗದಲ್ಲಿ ನೀ ಮೆರೆವೆ
ಹಿರಿಯ ಶಿಷ್ಯರ ಜೊತೆಯಲ್ಲಿ ಆಗ
ಬರೆ ಮಾನವಿಯಗುರುಗಳ ಕಂಡೆ || ೨ ||
ಮಾಣದೆ ನಿನ್ನಯ ಚರಿತೆ ನೋಡಿ
ಪ್ರಾಣೇಶದಾಸರು ಮನದಿ ತಾಳದಲೆ
ಸಾನುರಾಗದಿ "ಆದದ್ದಾಯ್ತು" ಎಂದು
ಗಾನಮಾಡಲು ಅದನು ನೀನರಿತೆ || ೩ ||
ಹಿಂದಿನ ಸುಜ್ಞಾನ ಬೆಳಗಿ ನಿನ್ನ
ಬಂಧನ ಕಳೆಯಿತು ಗುರುಗಳು ಆಗ
ಚಂದದಿ ಉಪದೇಶ ನೀಡಿ ಮತ್ತೆ
ಇಂದಿರಾಧವನ ಸೇವೆಗೆ ಅಣಿಮಾಡೆ || ೪ ||
ನರಜನ್ಮದಲಿ ನಾನು ಬಂದೆ ಅದರ
ಅರಿವಿಕೆ ಇಲ್ಲದೆ ಬಾಳಿದೆ ತಂದೆ
ಹರಿವರನ ಮತದ ಸುಧೆಯ ಗರೆದು
ವರದವಿಠಲನ ತೋರೋ ನೀನಿಂದು || ೫ ||

* ಈ ಕೃತಿಯನ್ನು ವರದೇಂದ್ರವಿಠಲದಾಸರ ಮಕ್ಕಳಾದ ಶ್ರೀ ಶ್ರೀನಿವಾಸದಾಸರು ರಚಿಸಿರುವರು.



"ವೆಂಕಟೇಶ ನೀನೇ ದೊರೀ ದೊರೀ
ಸಂಕಟವೆಲ್ಲವ ಪರಿಹರಿಸುವಂಥ"

(ಶ್ರೀದವಿಠಲ)



ಕರ್ಜಗಿಯಲಿರುವ ವಿಠಲನ ದೇವಾಲಯ.



"ಪಂಢರಿಯನೆ ಬಿಟ್ಟು ನೀನಿಲ್ಲಿಗೆ ಬಂದ್ಯಾ ವಿಠಲ"
ಕರ್ಜಗಿಯಲ್ಲಿ ನಿಂತ ಶ್ರೀದವಿಠಲರ ಆರಾಧ್ಯದೈವ "ಶ್ರೀವಿಠಲ".



ಶ್ರೀದವಿಠಲರು ಸೇವಿಸಿದ

**"ತಾಂಡವಕೃಷ್ಣ"**

ಇಂದು ಕರ್ಜಿಗಿಯ ವಿಠಲನ ಮಂದಿರದಲ್ಲಿದೆ.



ವಿಠಲನ ಮಂದಿರದ ಹೊರಪ್ರಾಕಾರದ
ಮಂಟಪದಲ್ಲಿರುವ ಶ್ರೀದವಿಠಲರ ಸ್ತಂಭ.
[illegible]



ವಿಠಲನ ಮಂದಿರದಲ್ಲಿ ಸ್ವಾಮಿಯ ಸನ್ನಿಧಾನದಲ್ಲಿರುವ
ಶ್ರೀದವಿಠಲರ "ಸ್ತಂಭ"

## ಶ್ರೀ ಜಗನ್ನಾಥದಾಸಸ್ತುತಿ

ರಾಗ -- ಧನಾಸರಿ ತಾಳ -- ಅಟ

ತಂಗಿ ನೀ ಕೇಳಿದ್ಯಾ ಅಂಗನಾಮಣೀ |
ರಂಗವಲಿದ ಭಾಗವತರ ಮಹಿಮೆಗಳ || ಪ ||

ಶ್ರವಣಾದಿ ನವವಿಧ | ಸವಿಯ ಭಕುತಿ ಇಂದ |
ಪ್ರವೀಣರೆನಿಸಿ ಶ್ರೀ ಮಾ | ಧವನ ಧ್ಯಾನಿಪ ಖ್ಯಾತಿ || ೧ ||

ಅಮಲ ಸತ್ಕರ್ಮದಿ | ಶಮ ದಮ ಪೂರ್ವಕ |
ಅಮಿತ ಮಹಿಮ ನಂಘ್ರಿ | ಕಮಲಾರ್ಚಿಪರ ಖ್ಯಾತಿ || ೨ ||

ಶ್ರೀದವಿಠ್ಠಲನ ಪಾದ ಭಜಕರಾದ | ಸಾಧು-
ವರ್ಯರ ಸುಬೋಧ ಬಣ್ಣಿಪರ ಖ್ಯಾತಿ || ೩ ||

-----

ರಾಗ -- ಶಂಕರಾಭರಣ ತಾಳ -- ಆದಿ

ಯಾತಕಿನ್ನನಾಥನೆಂಬುವದು ಕರುಣಾಳು ಜಗ-
ನ್ನಾಥದಾಸರ ಸೇರಿಕೊಂಬುವುದು || ಪ ||

ಭೀತಿಕರ ಬಹುಜನ್ಮಕೃತ ಮಹಾ
ಪಾತಕಾದ್ರಿಗಳನು ಭೇದಿಸಿ
ಮಾತುಳಾಂತಕ ನಂಘ್ರಿಕುಮುದದಿ
ನೀತಭಕ್ತಿಯ ನೀಡಿ ಸಲಹುವ || ಅ.ಪ. ||

ಘೋರತರ ಸಂಸಾರಪಾರಾವಾರ ದಾಟಿಸುವಾ ಲಕ್ಷ್ಮೀ-
ನಾರಸಿಂಹನ ನಿತ್ಯಪೂಜಾ ಭಾರ ವಹಿಸಿರುವಾ
ಮೂರುಲೋಕೋದ್ಧಾರ ದುರಿತೌಘಾರಿ ಕೃಷ್ಣ ಕಥಾಮೃತಾಬ್ಧಿಯ
ಸಾರ ತೆಗೆದು ಬೀರಿ ಕರುಣವ ತೋರಿ ಸುಜನೋದ್ಧಾರಮಾಡಿದ || ಪ ||

ವೇದ ಶಾಸ್ತ್ರಪುರಾಣವೆಲ್ಲವ ತೋರಿಲ್ಲಿಟ್ಟಿಹರು ಬಹುವಿಧ-
ವಾದ ದುರ್ಮತವಾದಿಗಳ ಮಾರ್ಗದಿ ಕಟ್ಟಿಹರೂ

ಮೋದತೀರ್ಥಮತಾನುಗತ ಸದ್ವಾದಪೂರ್ಣ ಪರಮಾತ್ಮದರ್ಶನ
ಶ್ರೀದನೊಲಿದು ಕೃಪಾಕಟಾಕ್ಷಪ್ರಸಾದ ಒಲಿವ ವಿನೋದಗೊಳಿಸುತ || ೧

ವೇದ ಶಾಸ್ತ್ರಪುರಾಣವೆಲ್ಲವ ತೋರಿಲ್ಲಿಟ್ಟಿಹರು ಬಹುವಿಧ-
ವಾರ ದುರ್ಮತವಾದಿಗಳ ಮಾರ್ಗದಿ ಕಟ್ಟಿಹರೂ
ಮೋದತೀರ್ಥಮತಾನುಗತ ಸದ್ವಾದಪೂರ್ಣ ಪರಮಾತ್ಮದರ್ಶನ
ಶ್ರೀದನೊಲಿದು ಕೃಪಾಕಟಾಕ್ಷಪ್ರಸಾದ ಒಲಿವ ವಿನೋದಗೊಳಿಸುತ || ೨

ಶ್ರೀ ರಮಾಪತಿ ಸರ್ವ ಸುಗುಣಾಧಾರ ದಯದಿಂದ ಮೂರೂರ
ಸೇರಿ ಬರುವದು ಸರ್ವಸಂಪತ್ಸಾರವಾನಂದ
ಕಾರುಣಿಕತನದಿಂದಲಿಂತುಪಕಾರ ಮಾಡಿದ ದೀನ ಜನರಿಗೆ
ಧೀರ ಶ್ರೀದವಿಠಲನ ತೋರಿದನು ನಿಜಭಕ್ತಜನರಿಗೆ || ೩

-----

ರಾಗ -- ಆನಂದಭೈರವಿ ತಾಳ -- ರೂಪ

ಸಂಗಸುಖವ ಬಯಸಿ ಬದುಕಿರೊ
ರಂಗವಲಿದ ಭಾಗವತರ || ಪ ||

ಸಂಗಸುಖವ ಬಯಸಿ ಬದುಕಿ
ಭಂಗಬಡಿಪ ಭವವನೂಕಿ
ಹಿಂಗದೆ [1]ನರಸಿಂಗನನ್ನು
ಕಂಗಳಿಂದ ಕಾಣುತಿಹರ || ಅ.ಪ. ||

ಪುಟ್ಟಿದಾರಭ್ಯ ಪರಮ ವೈಷ್ಣವಾಧ್ಯಕ್ಷರೆನಿಸಿ
ಶಿಷ್ಟಸದಾಚಾರದಲ್ಲಿ ನಿರತರಾಗಿ ನಿತ್ಯ ಮುದ್ದು
ಕೃಷ್ಣ ಕೀರ್ತನೆಯ ಪಾಡುತ ಮಧ್ವಮತವ
ಪುಷ್ಟಿಗೈಸಿ ಖಳರಕಾಡುತ ಕಾಮ್ಯಕರ್ಮ
ಬಿಟ್ಟು ಭಕ್ತಿಯನ್ನೆ ಮಾಡುತ ಬಂದಲಾಭ
ನಷ್ಟ ತುಷ್ಟಿಗಳಿಗೆ ಒಡಂಬಟ್ಟ ಬಗೆಯ ಪೇಳಲಿಷ್ಟ || ೧ ||

ಭೂತದಯಾಶೀಲರಾದ ನೀತಗುರುದ್ವಾರ ಜಗ-

ೀತ ವೃತ್ತಪದ ಸುಳಾದಿಯ ಪೇಳಿ ಪ್ರೇ-
ಮಾತಿಶಯದಿ ಮಧುವಿರೋಧಿಯ ಒಲಿಸಿಕೊಂಡು
ಜಾತರಾಗಿ ಜವನಬಾಧೆಯ ಬಯಲುಮಾಡಿ
ಖ್ಯಾತರಾಗಿಹರು ಪುಸಿಯಮಾತಿದಲ್ಲ ಮಾರಸಲ್ಲ || ೨ ||

ಮೇದಿನಿ ಮೇಲುಳ್ಳ ಗಂಗಾದಿತೀರ್ಥ ಪತಿಗಳಿವರ
ಪಾದುಕೊಂಡಿಹರು ಬಿಡದೆ ಸ್ವಾದಿರಾಜೇಂದ್ರರ ಪ್ರ-
ಸಾದದಿಂದ ಹರಿಕಥಾಮೃತಸಾರ ತತ್ವ
ಸಾಧು ಜನರಿಗಾಗಿ ಪ್ರಾಕೃತ ಸುಪದ್ಧತಿಯನು
ಸಾದರದಲಿ ಪೇಳಿ ದುಷ್ಕೃತ ದೂರಮಾಡಿ
ಮೋದಿಸುವರಿಗೆಣೆಗಾಣೆ ಶ್ರೀದವಿಠಲನ್ನಾಣೆ || ೩ ||

-----

ರಾಗ -- ರೇಗುಪ್ತಿ ತಾಳ -- ಅಟ

ಶ್ರೀ ಜಗನ್ನಾಥದಾಸಾ ನಮಿಪೆ ಗುರು-
ರಾಜಾ ತಾತ್ವಿಕವಪುಷಾ || ಪ ||

ಈ ಜಗದೊಳು ನಿಮಗೆಣೆಗಾಣೆ ಸತತ ನಿ-
ರ್ವ್ಯಾಜದಿ ಹರಿಯ ಗುಣೋಪಾಸನೆ ಮಾಳ್ಪ || ಅ.ಪ. ||

ಹರಿದಾಸಕುಲವರ್ಯನೆನಿಸಿ ಕಲ್ಪತರುವಂದದಿ ಚರ್ಯ
ಚರಿಸುತ ಧರೆಯೊಳು ಮೆರೆವ ಮಹಾತ್ಮರ
ಚರಣೇಂದೀವರ ಯುಗ್ಮ ದರುಶನ ಮಾಳ್ಪರ
ದುರಿತರಾಶಿಗಳಿರಗೊಡದೆ ನೆರೆ
ಪರಮ ಮುಕ್ತಿಯ ದಾರಿ ತೋರುತ
ಶಿರಿಸಹಿತ ಹರಿಯೊಲಿಯುವಂದದಿ
ಕರುಣ ಮಾಳ್ಪ ಸುಗುಣ ಮಹೋದಧಿ || ೧ ||

ರವಿಯು ಸಂಚರಿಸುವಂತೆ ಭೂವಲಯದಿ ಕವಿಗಳು ಚರಿಸುವಂತೆ
ಅವಿರುದ್ಧತ್ರಯ ಜ್ಞಾನ ಪ್ರವಹಗಳಿಂದಲಿ
ಭುವನೈಕವೇದ್ಯನ ಶ್ರವಣ ಭಕುತಿಯಿಂದ
ದಿವಸ ದಿವಸದಿ ಪ್ರೀತಿ ಬಡಿಸುತ

ಧ್ರುವವರದನಂಘ್ರಿಗಳಿಗರ್ಪಿಸಿ
ಭುವನಪಾವನ ಮಾಳ್ಪಗೋಸುಗ
ಅವನಿತಳದಿ ವಿಹರಿಸುತಿಹ ಗುರು

ಅಹೋರಾತ್ರಿ ಕ್ಷಣ ಬಿಡದೆ ಸನ್ಮನದಿ ಹೃದ್ಗುಹದೊಳಜನ ಮರೆ
ಸಹನ ಗುಣಗಣವನುದಿನ ಸ್ಮರಿಸುತ
ಸಹನಾದಿ ಶಮದಮ ಯಮ ನಿಯಮಗಳನು
ವಹಿಸಿ ಶ್ರೀದವಿಠಲನಂಘ್ರಿಯ
ಮಹಿಮೆ ತೋರುತ ಪೂಜಿಸುತ ಬಲ್
ಮಹಿತ ಪರಮಾನಂದತೀರ್ಥರ
ವಿಹಿತ ಶಾಸ್ತ್ರಗಳರಿತು ಬೋಧಿಪ

-----

ರಾಗ -- ಮಲಹರಿ ತಾ

ತೆರಳಿದರು ಶ್ರೀಜಗನ್ನಾಥದಾಸಾರ್ಯರು
ಸಿರಿಪತಿಯ ಸ್ಮರಿಸಿ ಹರಿಪುರಕೆ ಹರುಷದಲಿ

ವರಶುಕ್ಲ ವತ್ಸರದ ಭಾದ್ರಪದ ಶಿತಪಕ್ಷ
ಹರಿವಾರ ನವಮಿಯಲ್ಲೀ
ಸುರಸಿದ್ಧಸಾಧ್ಯಸನ್ಮುನಿಗಣಾರ್ಚಿತಪಾದ
ಹರಿಯೆ ಪರನೆಂದೆನುತಲಿ
ಧರಣಿಯನು ತ್ಯಜಿಸಿ ಬಹುಮಾನಪೂರ್ವಕವಾಗಿ
ಬೆರೆದು ಸುರಸಂದಣಿಯಲಿ
ಪರಮಾರ್ಥವೈದಿ ಮನ ಹರಿಯ ಪಾದದಲಿಟ್ಟು
ವರವಿಷ್ಣುದೂತ ವೈಮಾನಿಕರ ಒಡಗೂಡಿ

ಅತಿಪ್ರೇಮಿಗಳು ಹಸನ್ಮುಖಿರು ದಯಬೀರುವವರು
ಖತಿದೂರರಿವರು ಜಗದೀ
ಮಿತಿಮೀರಿ ಶ್ರೀಹರಿಯ ಕಥೆ ನಾನಾಪರಿಯಲ್ಲಿ
ಅತಿಶಯದಿ ಪೇಳಿ ಇಹಕೆ
ಸತತವು ಶರಣರ್ಗೆ ಗತಿಯಾಗುವಂತೆ ಸ-
ತ್ಪಥವಿಡಿಸಿ ಕರುಣದಿಂದ

ಹಿತವಂತರೆನಿಸಿ ಸಮ್ಮತ್ರವಾಗಿ ಸರ್ವರಿಗೆ
ಮತಿದೋರಿಕೊಟ್ಟು ಸದ್ಗತಿಯ ಗೋಸುಗವಾಗಿ || ೨ ||

ಆಚರಣೆಯಲಿ ಒಂದರಘಳಿಗೆ ಬಿಡದೆ ಬಲು
ಖೇಚರಾರೂಢ ಹರಿಯಾ
ಸೋಚಿತಾರಾಧನೆಯ ಮಾಡಿ ಮರೆಯದಲೆ ಮಹಾ
ವೈಚಿತ್ರವನ್ನು ತೋರಿ
ಈ ಚರಾಚರದಿ ಸಂಗೀತ ಸಾಹಿತ್ಯದಲಿ
ಪ್ರಾಚುರ್ಯವಂತರೆನಿಸೀ
ಆ ಚತುರ್ದಶಭುವನಪತಿ ಶ್ರೀದವಿಠಲನ
ಯೋಚನೆಯ ಬಿಡದೆ ಮಂಗಳ ಶಬ್ದವಾದ್ಯದಿಂ || ೩ ||

-----

## ಸತ್ಯಧರ್ಮರ ಸ್ತೋತ್ರ

ರಾಗ -- ಪೀಲು ತಾಳ -- ಆದಿ

ಚೆತ್ತೈಸೈ ಬಿನ್ನೈಸುವೆ ಪರಾಕು
ಸತ್ಯಧರ್ಮ ಸದ್ಗುರುರಾಯ || ಪ ||

ನಿನ್ನ ನಂಬಿದವ, ಧನಮದಾಂಧರಿಗೆ
ಇನ್ಯಾತಕೆ ತೆರೆಯಲಿ ಬಾಯ || ೧ ||

ಕಾಲಹರಣ ಬಲು ಕಷ್ಟವಾಗುತಿದೆ
ಪಾಲಿಸುವುದು ಸತ್ಪಾಥೇಯ || ೨ ||

ಶ್ರೀದವಿಠಲಾಶ್ರಿತಜನವತ್ಸಲ
ಸಾಧು ಸೇವ್ಯ ಸತ್ಕವಿಗೇಯ || ೩ ||

-----

ರಾಗ -- ಯಲಕಲ ಕಾಂಬೋಧಿ ತಾಳ -- ಆದಿ

ಇಗೋ ತುಂಗಾತೀರದಲ್ಲೆ ನಿಂತೂ
ವಿಹರಿಸುತಿಹರಿಂತೂ || ಅ.ಪ. ||

ಕುಂದದೆ ವರಮಂತ್ರಾಲಯದಲ್ಲಿರುವ
ಕರೆದಲ್ಲಿಗೆ ಬರುವ
ಬೃಂದಾವನಗತ ಮೃತ್ತಿಕೆ ಜಲಪಾನ
ಮುಕ್ತಿಗೆ ಸೋಪಾನ
ಸಂದರ್ಶನ ಮಾತ್ರದಲಿ ಮಹತ್ಪಾಪ
ತರಿದೋಡಿಸಲಾಪ
ಮಂದ ಭಾಗ್ಯರಿಗೆ ದೊರೆಯದಿವರ ಸೇವಾ
ಶರಣರ ಸಂಜೀವ || ೧ ||

ಶ್ರೀ ಸುಧೀಂದ್ರ ಕರಸರೋಜ ಸಂಜಾತ
ಜಗದೊಳಗೆ ಪುನೀತ
ದಾಶರಥಿಯ ದಾಸತ್ವವ ತಾನ್ವಹಿಸಿ
ದುರ್ಮತಗಳ ಜೈಸಿ
ಈ ಸಮೀರಮತ ಸಂಸ್ಥಾಪಕನಾಗೀ
ನಿಂದಕರನು ನೀಗಿ
ಭೂಸುರರಿಗೆ ಸಂಸೇವ್ಯಸದಾಚರಣೀ
ಕಂಗೊಳಿಸುವ ಕರುಣೀ || ೨ ||

ಶ್ರೀದವಿಠಲನ ಸನ್ನಿಧಾನ ಪಾತ್ರ
ಸಂಸ್ತುತಿಸಲು ಮಾತ್ರ
ಮೋದ ಬಡಿಸುತಿಹ ತಾನಿಹಪರದಲ್ಲಿ
ಈತಗೆ ಸರಿ ಎಲ್ಲಿ
ಮೇದಿನಿಯೊಳಗಿನ್ನರಸಲು ನಾ ಕಾಣೆ
ಪುಸಿಯಲ್ಲೆನ್ನಾಣೆ
ಪಾದಸ್ಮರಣೆಯ ಮಾಡದವನೆ ಪಾಪಿ
ನಾ ಪೇಳ್ವೆನು ಸ್ಥಾಪೀ || ೩ ||

-----

ರಾಜರ ಭಾಗ್ಯವಿದೂ | ಸೋದೆ || ಪ ||

ಸೋಜಿಗವೆನಿಸಿ ವಿರಾಜಿಸುತಿದಕೋ || ಅ.ಪ. ||

ಬುಧ ಜನಕೊಪ್ಪುವ ಪದಸುಳಾದಿ ಖಳ-
ರೆದೆಗಿಚ್ಚೆನಿಸುವ ಚತುರತೆಯಾ
ಸದಮಲ ನಾನಾ ವಿಧ ಗ್ರಂಥದಿ ಹಯ-
ವದನನ ಪೂಜೆಯು ಯಜಿಸುವದೆಲ್ಲಾ | ೧ ||

ತಮ್ಮಯ ನೇಮವು ಒಮ್ಮೆಗು ಬಿಡದಂ
ತುಮ್ಮಯ ಬಡದಲೆ ಸಮ್ಮೊಗದಾ
ಅಮ್ಮಹ ಶಾಸಖಿ ಬೊಮ್ಮ ಭೂತವನು
ಘಮ್ಮನೆ ನಿರ್ಮಿಸಿ ರಮ್ಮಿಪ್ರುದೆಲ್ಲ || ೨ ||

ಮೇದಿನಿಯೊಳಗೆ ಶುಭೋದಯಕಾರಕ
ಸ್ವಾದಿ ಸ್ಥಳ ಸರ್ವಾಧಿಕವ್ವೆ
ಪಾದದ್ವಯದಾಗಾಧ ಮಹಿಮನೆ ಈ
ಶ್ರೀದ ವಿಠ್ಠಲನ ಆರಾಧನೆಯೆಲ್ಲಾ || ೩ ||

-----

ರಾಗ -- ಧನ್ಯಾಸಿ ತಾಳ -- ಅಟ

ಇದಿರ್ಯಾರೊ ಗುರುವೆ ಸಮರ್ಯಾರೋ || ಪ ||

ದುರುಳವಾದಿಗಳನು ಮರುಳು ಮಾಡೋರನ್ನ
ತರಿದಿಟ್ಟು ಚಂದ್ರಿಕ ಗ್ರಂಥವಂ ರಚಿಸಿ
ಧರಣಿ ಸುರರ ಪರಿವೃಢರ ಸುನಿಕರಕ್ಕೆ
ಪರಿಪರಿಯಲ್ಲುಪದೇಶಿಸುತಿಪ್ಪಗೆ || ೧ ||

ಕನಕಕಶಿಪು ತನಯನ ಘನ ಅಂಶದಿ
ಫಣಿಗಣರಮಣನ ವೇಷದಿ ಪೊಳೆಯುತ
ದಿನದಿನದಲಿ ಹರಿ ಮನದಣಿಸುತಲಿಪ್ಪ
ಘನಮಹಿಮನೆ ಯತಿಕುಲತಿಲಕ || ೨ ||

ಲಂಡವಾದಿಗಳೆಂಬೊ ದಂಡವೆ ತಂಡಕೆ
ಗಂಡುಸಿಂಹ ತರ್ಕತಾಂಡವ ಯುಕುತಿಯ
ದಂಡುಗಳನೆ ಕಟ್ಟಿಕೊಂಡು ತಾರ್ಕಿಕರ
ಷಂಡಗಳನು ಖಂಡಿಸುತಿಹ ಯತಿಯೆ

ಬ್ರಹ್ಮಣ್ಯತೀರ್ಥರ ಕರಕಮಲದಿ ಪುಟ್ಟಿ
ಬ್ರಹ್ಮಜನಕ ನರಸಿಂಹ ಮೂರುತಿಯ ಹೃ-
ದ್ಗಹ್ವರದಲಿ ಧ್ಯಾನಿಸುತಿಹ ವ್ಯಾಸರಾ-
ಜಾಹ್ವಯದಿಂ ಭುವಿಯೊಳ್ಮೆರೆದ

ದಶದಿಶೆಯಲಿ ದಶರಥಸುತ ಮಹಿಮೆಯ
ಕುಶಲದಿಂದಲಿ ಸಭೆಯೊಳಗೆ ಸ್ಥಾಪಿಸುತ
ಹೊಸಹೊಸ ಬಿರದು ತಂದ್ಹೆಸರುವೆತ್ತಿರುವಂಥ
ವಸುಧೆಯೊಳಗೆ ಸೂಕರಸುಚರಿತಗೆ

ಹೊಳೆಯುತಲಿರುವ ರುಗ್ಮಿಣಿಪತಿ ಕೃಷ್ಣನು
ನಲಿಯುತ ಕುಣಿ ಕುಣಿದಾಡುತಲಿಪನು
ಥಳ ಥಳಿಸುವ ರಾಮವೇದವ್ಯಾಸರು ನಿಮ-
ಗಿಳೆಯೊಳಮೂಲ್ಯಪ್ರಸಾದವ ನೀವರು

ಶ್ರೀದವಿಠಲಗತಿಪ್ರಿಯರಾದ ಶ್ರೀ-
ಪಾದರಾಯರಲ್ಲಿ ಓದಿ ಗ್ರಂಥಗಳ
ವಾದಿರಾಜ ವಿಜಯೀಂದ್ರ ಪ್ರಮುಖರಿಗೆ
ಆದರದಲಿ ಪಾಠ ಹೇಳುತಲಿಪ್ಪನೆ

-----

ರಾಗ -- ಭೂಪಾಳ, ಉದಯ.

ಭಾಗೀರಥೀದೇವಿ ಭಯನಿವಾರಣಿ ಗಂಗೆ
ಸಾಗರನ ನಿಜರಾಣಿ ಸಕಲ ಕಲ್ಯಾಣೀ

ಒಮ್ಮೆ ಶ್ರೀ ವಿಷ್ಣುಪಾದದಲಿ ಉದ್ಭವಿಸಿದೇ
ಬ್ರಹ್ಮನ ಕರಪಾತ್ರೆಯಲಿ ಬಂದೆ

ಬ್ರಹ್ಮಾಂಡವೆಲ್ಲ ಪಾವನವೆನಿಸಿದೆ

ದೇವಿ ನೀ ವಿಷ್ಣುಪಾದದಲಿ ಉದ್ಭವಿಸಿದೆ
ದೇವತೆಗಳೆಲ್ಲ ನಿಮ್ಮಾಧೀನವೂ
ಆವ ಮಹಾದೇವನು ತಲೆಬಾಗಿರಲಾಗಿ ಮಹಾ-
ದೇವ ಶಿರಸಿನಲಿ ಉದ್ಭವಿಸಿದೆ ಜಗವರಿಯೆ

ದೃಷ್ಟಿಸಿ ನೋಡಲು ನೂರು ಜನ್ಮದ ಕೃತಪಾಪ
ಮುಟ್ಟಿದರೆ ಮುನ್ನೂರುಜನ್ಮದ ಪಾಪವು
ಮುಟ್ಟಿಮಾಡಲು ಒಂದು ಸ್ನಾನಮಾತ್ರದಿಂದ
ಸುಟ್ಟುಹೋಗುವುದು ಸಹಸ್ರಜನ್ಮದ ಪಾಪ

ಜಹ್ನು ಋಷಿಯಿಂದಲಿ ಬಿದ್ದಕಾರಣದಿಂದ
ಜಾಹ್ನವೀ ಎಂತೆಂದು ನೀ ಕರೆಸಿಕೊಂಡೆ
ಮುನ್ನ ನರಕಾಸುರನ ಸಗರರಾಯನ ವಂಶ-
ವನ್ನು ನೀ ಪಿಂತೆ ಪಾವನಮಾಡ ಬಂದೆ

ವಿಸ್ತಾರದಲಿ ಪೊಳೆವ ಮುತ್ತಿನಾಸರಗಳು
ಮತ್ತೆ ರಂಗಯ್ಯ ಪವಡಿಸಿದ ನೋಡಿ
ಮಿತ್ರೆ ಮಹಾಲಕ್ಷ್ಮಿಯು ಉರಸ್ಥಳದಲಿರಲಾಗಿ
ಇತ್ತ ಶ್ರೀ ಶ್ರೀದವಿಠಲನರಸಿ ಬಂದೆ

-----

ರಾಗ -- ಕಾಂಬೋಧಿ

ಅಗಜೆ ನಿನ್ನೊಗೆತನಕೆ ಜಗ ನಗುವದೇ
ನಗರಾಜ ಈಮನೆಯ ಹೋಗಿಸಿದನೆ ಅಕಟಕಟ

ಹೊಟ್ಟೆಗಿಲ್ಲದೆ ಹೋಗಿ ಹಾಲಾಹಲವನುಂಡ
ತೊಟ್ಟ ತೊಗಲುಡುಗೆ ತಲೆ ಬೋಡು ಕೈಯ
ಸುಟ್ಟ ಸುಡಗಾಡು ಮನೆ ಅಖಿಳಭೂತೇಶ ಬಲು
ಸಿಟ್ಟಿನವನಂಗ ಸಂಗವ ಬಯಸಬಹುದೇ

ಆರುಮೊಗದವನೊಬ್ಬ ಆತ್ಮಜನು ಮೊಲೆಪಾಲು
ಕಾರಿ ಕಡುಮುನಿದು ಕಂಡರೆ ಸೇರನು
ಊರಿಗುಪಕಾರಿ ಒಡಲ್ಡರಕ ಗಜಮುಖದವನು
ನಾರಿಮೇನಕೆ ಮಗಳ ಕಂಡು ಹಿಗ್ಗುವಳಯ್ಯ

ಶಿವಶಕ್ತಿ ನಿನ್ನಂಥ ಸೌಭಾಗ್ಯವಂತಿಯಳ
ಭುವನದೊಳಗಾವಲ್ಲಿ ಕಾಣೆನಿನ್ನು
ಕವಿಜನಗಳೇನೆಂದು ಬಣ್ಣಿಸಿದರೋ ತಿಳಿಯೆ
ಭವದೂರ ಶ್ರೀದವಿಠಲರಾಯ ಬಲ್ಲ

-----

ರಾಗ -- ಮೋಹನ ತಾ

ಶಿವನೇ ನಾ ನಿನ್ನ ಪರಿಸರನಯ್ಯ
ಕರುಣದಿ ಪಿಡಿ ಕೈಯ್ಯಾ ಶಿರಿಧರನರಮಯ್ಯ

ಭವಮೋಚಕ ಭಾಗವತಶಾಸ್ತ್ರವನು
ಅವನೀಶಗೆ ಪೇಳ್ದವ ನೀನಲ್ಲವೆ ||

ವೈಕಾರಿಕ ತೈಜಸ ತಾಮಸವೆಂಬ ತ್ರೈತತ್ವಗಳೆಂಬ
ಸಾಕಾರಿ ಶಾರ್ವರಿಧವಧರ ಸಾಂಬ ಸುರಪಾದ್ಯರ ಬಿಂಬ
ವೈಕಲ್ಯಾಸ್ಪದವ ಕಳೆದೊಮ್ಮಿಗ್ರೆ
ವೈಕುಂಠಕೆ ಕರೆದೊಯ್ಯೊ ಕರಿಗೊರಳಾ

ಮೃತ್ಯುಂಜಯ ಮುಪ್ಪುರಹರ ಮಹದೇವ ದೇವರ್ಕಳಕಾವ
ಸ್ತುತ್ಯಾದ್ರಿಜ ದಿತಿಜತತೀವನದಾವಾ ದುರಿತಾಂಬುಧಿನಾವ
ಕೃತ್ತಿವಾಸ ಎನ್ನತ್ಯಪರಾಧಗ-
ಳೆತ್ತಿಣಿಸದೆ ಕೃತಕೃತ್ಯನ ಮಾಡೈ

ಗಂಗಾಧರ ಷಣ್ಮುಖಗಣಪರ ತಾತ ತ್ರೈಲೋಕ್ಯತ್ರಾತ
ಲಿಂಗಾಹ್ವಯ ತಾರಕಹರ ನಿರ್ಭೀತ ಭುವನಾಧಿನಾಥ
ತುಂಗಮಹಿಮ ನಿಸ್ಸಂಗ ಹರಿಯ ದ್ವಿತಿ
ಯುಂಗ ಡಮರು ಶೂಲಂಗಳ ಪಿಡಿದಿಹ

ಪಂಚಾನನ ಪನ್ನಗಭೂಷಣ ಭೀಮ ಭುವನಾಭಿರಾಮ
ಸಂಚಿಂತನಮಾಡುವ ಸಂತತನೇಮ ಶ್ರೀರಾಮನಾಮ
ಪಂಚಶರಾರಿ ವಿರಿಂಚಿಕುವರ ನಿ-
ಷ್ಕಿಂಚನರೊಡೆಯನ ಮಂಚಪದಾರ್ಹನೆ || ೪ ||

ಸ್ಫಟಿಕಾಭ ಕಪಾಲಿ ಕಾಮಿತಫಲದಾ ಫಲ್ಗುಣಸಖಶ್ರೀದ-
ವಿಠಲ ವಿತ್ತಪಮಿತ್ರ ದ್ವಿರದ ಚರ್ಮಾಂಬರನಾದ
ಕುಟಿಲರಹಿತ ಧೂರ್ಜಟಿ ವೃಷಭಧ್ವಜ
ನಿಟಿಲನಯನ ಸಂಕಟವ ನಿವಾರಿಸೊ ||.೫ ||

-----

ರಾಗ -- ಮಧ್ಯಮಾವತಿ ತಾಳ -- ಅಟ

ಎಂದು ಕಾಂಬೆನೊ ನಿನ್ನಾ ಹೇ ಶ್ರೀನಿವಾಸಾ || ಪ ||

ನಗೆಮೊಗದ ನತಜನ ಬಂಧು ಬಾರೆನ್ನ ಬಿ-
ಟ್ಟಗಲದಲೆ ಮನ ಮಂದಿರದೊಳಿರು ಮುನ್ನಾದರು ಸುಪ್ರಸನ್ನ
ಮುಂದೆ ಗತಿ ಏನಯ್ಯ ಮುಕುತರ
ಹಿಂದುಳಿದವನಲ್ಲದಲೆ ತನು ಸಂ-
ಬಂಧಿಗಳ ವಶನಾಗಿ ದುರ್ವಿಷ-
ಯಾಂಧಕಾರದಿ ಮುಳುಗಿದೆನೊ ನಾ || ಅ.ಪ. ||

ಹಲವು ಜನ್ಮದ ನೋವಾ ನಾ
ಹೇಳಿಕೊಳಲೇನೆಲವೊ ದೇವರ ದೇವಾ ನೀ
ನಲ್ಲದಲೆ ಭೂವಲಯದೊಳಿಗಿನ್ನಾವಾ ನಂಬಿದರ ಕಾವ
ಸುಲಭರೊಳಗತಿ ಸುಲಭನೆಂಬುವ
ಅಲವಬೋಧಮತಾನುಗರು ಎನ-
ಗೊಲಿದು ಪೇಳಲು ಕೇಳಿ ನಿಶ್ಚಂ-
ಚಲದಿ ನಿನ್ನನೆ ಧೇನಿಸುವೆ ನಾ
ಕಲುಷ ಸಂಸ್ಕಾರಗಳ ವಶದಿಂ

[illegible]
ಭಾರ ನಿನ್ನದೊ ಜೀಯಾ ಜಗವರಿಯೆ ಕರುಣಾ-
ವಾರಿಧಿಯೆ ಪಿಡಿಕೈಯ್ಯಾ ಫಣಿರಾಜಶಯ್ಯಾ
ತಾರಕನು ನೀನೆಂದು ತಿಳಿಯದ
ಕಾರಣದಿ ಸುಖ ದುಃಖ ಮಯ ಸಂ-
ಸಾರ ದುಸ್ತರ ಶರಧಿಯೊಳು ನಾ
ಪಾರಗಾಣದೆ ಪರಿದು ಪೋಪೆನೊ
ದೂರನೋಳ್ಪದು ಧರ್ಮವಲ್ಲವೊ
ದ್ವಾರಕಾಪುರನಿಲಯ ಪರಮೋ-
ದಾರ ತನುವೆಂದೆನ್ನ ಪಾಲಿಗೆ
ಬಾರದಲ್ಲದೆ ಭವವಿಮೋಚನ ॥ ೨ ॥

ವಿಖನಸಾರ್ಚಿತಪಾದ ವಿಶ್ವೇಶ ಜನ್ಮಾ-
ದ್ಯಖಿಲ ಕಾರಣನಾದ ನಿರ್ದೋಷ ಸತ್ಯಾ-
ಸುಖಗುಣಾರ್ಣವ ಶ್ರೀದವಿಠಲ ಪ್ರಸೀದ
ಸಕಲ ಕ್ರಿಯ ಯೋಗಗಳು ತನು ಬಂ-
ಧಕವು ನಿನಗೊಪ್ಪಿಸದಿರಲು ಎನೆ
ನಿಖಿಳ ಜೀವರ ಭಿನ್ನ ನಿನ್ನಯ
ಯುಕುತಿಗೆ ನಮೊ ಎಂಬೆನಲ್ಲದೆ
ಯುಕುತ ಯುಕ್ತಿಗಳೊಂದರಿಯದ-
ರ್ಭಕನ ಬಿನ್ನಪ ಸಲಿಸಿ ನವವಿಧ
ಭಕುತಿ ಭಾಗ್ಯವ ಕೊಟ್ಟು ತವ ಸೇ-
ವಕರ ಸೇವಕನೆನಿಸದಿರ್ದೊಡೆ ॥ ೩ ॥

-----

ರಾಗ -- ಹರಿಕಲ್ಯಾಣಿ ತಾಳ -- ಆದಿ

ದಾಶರಥೇ ದಯಮಾಡೊ ನಿನ್ನ
ದಾಸರದಾಸನ ನೋಡೋ ॥ ಪ ॥

ನೀರಜಾಕ್ಷ ನಿಜಮಾಯಾ ಮಮತೆ ಸಂ-
ಸಾರಶರಧಿಯೊಳು ಬಿದ್ದು
ಪಾರಗಾಣದೆ ಪರಿದು ಪೋಗುವೆನು
ತಾರಕ ನೀನೆನಗಿದ್ದು ಹರಿ ಹರಿ ॥ ೧ ॥

ತುಂಬಿದ ಭಂಡಿಗೆ ಮೊರಭಾರವೆ ಎನ-
ಗಿಂಬಿಲ್ಲವೆ ನಿನ್ನಲಿ
ನಂಬಿದ ಭಕ್ತರ ಸಲಹುವ ವಿಶ್ವಕು-
ಟುಂಬಿ ಎನಿಸಿಕೊಳವಲ್ಲಿ ಹರಿ || ೨ ||

ಬಲ್ಲಿದರೊಳು ಬಡವರಿಗಾಶ್ರಯ ನೀ
ಬಲ್ಲೆ ಮತ್ತೆ ಎನಗೀಗ
ಎಲ್ಲಿದ್ದರು ಶ್ರೀದವಿಠಲ ಬಿಡ
ದಲ್ಲೊ ನಿನ್ನವಗೆ ಬೇಗ || ೩ ||

-----

ರಾಗ -- ನವರೋಜ ತಾಳ -- ಆದಿ

ರಂಗಯ್ಯ ರಂಗ ಬಾರೋ
ಬರುತೀಯ ನಮ್ಮನಿಗೆ ಬಾರೋ || ಪ ||

ಬಂದರೆ ಬುಗುರೀ ಚಂಡುಗಳನೆ ಕೊಟ್ಟು
ಬಗೆ ಬಗೆ ಆಟವ ಕಲಿಸಿ ಒಲಿಸುವೇ || ೧ ||

ಬಂದರೆ ರಸ ರಸಾಯನಗಳುಣಿಸೀ
ಮುಸುಕಿನೊಳಗೆ ಬಚ್ಚಿಟ್ಟುಕೊಂಬೆನು ಬಾರೊ || ೨ ||

ಬಂದರೆ ಶ್ರೀದವಿಠ್ಠಲ ನಿನಗೇ
ಸುಂದರ ಸವಿಮಾತಾ ಹೇಳುವೆನೊಂದು || ೩ ||

-----

ರಾಗ -- ತೋಡಿ ತಾಳ -- ಆದಿ

ರೂಪತೋರಿಸೊ ರಂಗ ನಿಜರೂಪ ತೋರಿಸೋ || ಪ ||

ರೂಪ ತೋರಿಸೊ ರತಿಪತಿಜನಕ-
ಗೋಪ ಮನೆಗೆ ಬರುವತನಕಾ || ಅ.ಪ. ||

ಕೇವಲ ಕಲ್ಲದುಮನಹುದೆಂದು

ಅಣುಮಹದ್ಘಟಿತಾಘಟಿತ ಚತುರನೆ
ಪ್ರಣತಕಾಮದನು ನೀನೇ

ಶ್ರೀದವಿಠಲ ಶರಣು ಎನೆ ಕೇಳೋ
ಪಾದಕ್ಕೆರಗುವೆ ಕೃಪಾಳೋ

-----

ರಾಗ -- ಶಂಕರಾಭರಣ

ಏನಿದು ಕೌತುಕವೋ ವಿಠಲಾ
ಏನಿದು ಕೌತುಕವೋ

ಏನಿದು ಕೌತುಕ ಪಂಢರಿಯನೆ ಬಿಟ್ಟು
ನೀನಿಲ್ಲಿಗೆ ಬಂದ್ಯ ವಿಠಲ

ಮಿಥ್ಯಾವಾದಿಗಳು ನಿನ್ನ ಸುತ್ತುಮುತ್ತಿಕೊಂಡು
ಅತ್ತುಕರೆದು ಕೂಗುತ್ತಿರೆ ಬಹುಬ್ಯಾಸತ್ತು ಬಂದೆಯಾ ವಿಠಲ

ಮಧ್ವದ್ವೇಷಿಗಳು ಮಾಡುವ ಪದ್ಧತಿಯನು ಕಂಡು
ಹೃದ್ಯವಾಗದೆ ಕದ್ದ ಕಳ್ಳನಂತೆದ್ದು ಇಲ್ಲಿಗೆ ಬಂದ್ಯಾ ವಿಠಲಾ

ಶ್ರೀದವಿಠಲ ನಿಮ್ಮ ಸದ್ಗುಣವೇದಶಾಸ್ತ್ರದಲ್ಲಿ
ಶೋಧಿಸಿ ನೋಡುವ ಭೂದೇವರಿಗೊಲಿದಾದರಿಸಲು ಬಂದ

-----

ರಾಗ -- ಕಲ್ಯಾಣಿ ತಾಳ

ನೋಡು ನೋಡೆಂಥಾ ರಘುವೀರ ದೀನೋದ್ಧಾರ

ತನು ಮನ ಧನಗಳ ತನಗೊಪ್ಪಿಸದೆ
ನೆನೆವ ಮನುಜರಿಗೆ ದೂರಾ ದೂರಾ

ಸೇರಿದ ಸುಜನರ ದೂರುವ ದುರುಳರ
ದೇರಿಗೆರೆವ ಬಿಸಿನೀರಾ ನೀರಾ

ಶ್ರೀದವಿಠಲ ನಿಜಪಾದಾಶ್ರಿತರಪ-
ರಾಧವ ಮನಸಿಗೆ ತಾರಾ ತಾರಾ ॥ ೩ ॥

-----

ರಾಗ -- ದೇಹಾಗ್ ತಾಳ -- ಆದಿ

ನೋಡು ನೋಡು ನಾರೀಮಣಿಯೆ ॥ ಪ ॥

ನೋಡು ನೋಡು ನಿನ್ನಾ ಕಣ್ಮನ ದಣಿಯಾ ॥ ಅ.ಪ. ॥

ಮುದ್ದು ಸೂಸುವ ಸಲೆ ಮುಗುಳ್ನಗೆ ಮೊಗವಾ
ತಿದ್ದಿದ ಕಸ್ತೂರಿ ತಿಲಕದ ಘಣಿಯಾ ॥ ೧ ॥

ಸಾರಾ ಗಂಭೀರ ಶೃಂಗಾರ ವಿಹಾರಾ
ಚಾರು ಸೌಂದರ್ಯ ವೈಯ್ಯಾರ ಸುಗುಣಿಯಾ ॥ ೨ ॥

ಶ್ರೀದವಿಠ್ಠಲ ಸಾಕ್ಷಾತ್ರಿಜಗನ್ಮಯಾ
ಇಂದ್ರಶರಾ ಜಗನ್ಮೋಹನ ಖಣಿಯಾ ॥ ೩ ॥

-----

ಸುಳಾದಿ

ರಾಗ -- ನಾಟಿ ತಾಳ -- ಝಂಪೆ

ನೋಡುವರೆ ನೀರದಶ್ಯಾಮಸುಂದರ ಮೂರ್ತಿ
ಪಾಡುವರೆ ಪರಮಪಾವನ್ನ ಕೀರ್ತಿ
ಕೂಡುವರೆ ಕೇವಲಾನಂದ ಚಿನ್ಮಯಗಾತ್ರ
ನೀಡುವರೆ ನಿಖಿಳಲೋಕೈಕಪಾತ್ರ
ನೋಡಿ ನಮಿಸುವರುಂಟು ಪಾಡಿ ಹಿಗ್ಗುವರುಂಟು
ಕೂಡಿ ಸುಖಿಸುವರುಂಟು ನೀಡಿ ನಲಿವವರುಂಟು
ನೋಡಿಸುತ ಪಾಡಿಸುತ ಕೂಡಿಸುತ ಬೇಡಿಸುತ
ನಾಡದೈವಂಗಳ ಕೊಂಡಾಡಿಸದಲೆ
ಬೇಡಿದಿಷ್ಟವ ಕೊಡುತ ಶ್ರೀದವಿಠಲ ದಯ-
ಮಾಡಿ ನಮ್ಮನು ಪೊರೆವ ರೂಢಿಗೊಡೆಯ
ನಾಡದೈವಂಗಳ ಕೊಂಡಾಡಿಸದಲೆ ॥ ೧ ॥

ತಾಳ - ಮಟ್ಟ

ಸಕಲ ಶ್ರುತಿನಿಕರಸಾರಹೋ
ಶುಕಮಹಾಮುನೀಂದ್ರ ಸನ್ನುತ
ಪ್ರಕಟ ಮಾಡದಲೇಕೆ ನಿನ್ನನು ಪರಮಪುರುಷ
ಪ್ರಕಟಮಾಡಲ್ಯಾಕೆ ನಿನ್ನನು
ಭಕ್ತವತ್ಸಲ ನೆಂಬೆನಲ್ಲದೆ
ಮುಕುತವಂದ್ಯ ಶ್ರೀದವಿಠಲ
ಯುಕುತಾಯುಕುತ ವ್ಪೊಂದನರಿಯದೆ
ಪ್ರಕಟಮಾಡಲೇಕೆ ನಿನ್ನನು

ತಾಳ - ತ್ರಿವಿಡಿ

ಆಯನುಭವ ಭಯ ಲಯವರ್ಜಿತ
ನಯನೋತ್ಸಹಕಾರಕ ತಾರಕ
ಜಯಮಂಗಳ ಮಂಗಳ ಮಂಗಳ
ಮಾಯಾ ಮಾಮರ ದೇವರಾಟ್
ಸಯವೇ ಸೈ ಶ್ರೀದವಿಠಲ ನಿ-
ನ್ನಯ ಚರಣಕೆ ನಮಿಸುವೆ ನಮಿಸುವೆ
ಜಯ ಮಂಗಳ ಮಂಗಳ ಮಂಗಳ
ಮಾಯಾ ಮಾಮರ ದೇವರಾಟ್

ತಾಳ - ಅಟ

ಬಾರೋ ಬಾರೋ ಭವದೂರ ದೀನಜನ-
ಭಾರ ನಿನ್ನದಯ್ಯಾ ಅಯ್ಯಯ್ಯಾ
ಸಾರಿದೆನೊ ನಿನ್ನ ನಾ ನಿನ್ನ ಸಾರಿದೆನೋ ನಿನ್ನ
ಶ್ರೀರಮಣ ಶ್ರೀದವಿಠಲ ಸಂ-
ಸಾರಕಂಜಿ ನಿಜಚಾರುಚರಣಗಳ ಸಾರಿದೆನೊ ನಿನ್ನ

ತಾಳ - ಆದಿ

ಶಿರಿಗುರವಿತ್ತೆ ಪರಮನಪೆತ್ತೆ
ಗಿರಿಜೇಶಗೆ ನಿನ್ನರಮ್ಮೆ ಇತ್ತೆ

ಶರಣಾಗತವತ್ಸಲ ಕರುಣಾಕರ ಶ್ರೀದವಿಠಲ
ಸರಿಬಂದರೆ ಸಾಕುವದೆಮ್ಮನು
ಶರಣಾಗತವತ್ಸಲ || ೫

ಜತೆ

ಸೋಲು ಶ್ರೀದವಿಠಲ ಸೋಲು ಗೆಲುವು ನಿನ್ನ
ಪಾಲಿಗೆ ಬಂದಿರೆ ಪಾಲಿಸೆಮ್ಮನು ಬಿಡದೆ ||

-----

ರಾಗ -- ಗಮನಕ್ರಿಯೆ ತಾಳ -- ಆ

ಜಯ ಜನಕಜಾಪತೇ ರಾಮಾ || ಪ

ಜಯ ಜನಕಜಾಪತೇ ಜಲದಶ್ಯಾಮಾ
ಜಯ ರಘುವಂಶಲಲಾಮಾ || ಅ.ಪ.

ಮದನಜನಕ ಮಧುಕೈಟಭ ಭೀಮಾ
ಮದನ ಬಿಂಬಾರ್ಚಿತಕಾಮಾ || ೧

ರಾಮಚಂದ್ರ ರಘುವೀರ ಜಾನಕಿ-
ರಾಮ ರಾವಣವೈರಿ ಶ್ರೀರಾಮ || ೨

ಸಾಮಜವರದ ವಿನುತಸೋಮ
ಶ್ರೀದವಿಠಲ ಗುಣಧಾಮಾ || ೩

-----

ರಾಗ -- ಕಲ್ಯಾಣಿ ತಾಳ -- ಆ

ವೆಂಕಟೇಶ ನೀನೆ ಧೊರೀ ಧೊರೀ || ಪ

ಸಂಕಟವೆಲ್ಲವ ಪರಿಹರಿಸುವಂಥ || ಅ.ಪ.

ಎತ್ತಿನ ಪೆಸರುಳ್ಳ ಮತ್ತರಕ್ಕಸನ್ನ
ಕುತ್ತಿಗೆ ಕೊಡಲುತ್ತಮ ಪದವಿತ್ತೆ || ೧

ಸಾಸಿರ ಮುಖವುಳ್ಳ ಶೇಷನಹಂಕಾರ
ಸ್ವಸನನ ಕೈಯಿಂದ ನಾಶಮಾಡಿಸಿದಂಥ || ೩ ||

ಮಾಧವ ಮಾದಿಗ ಹಾದಿಯ ಮೆಟ್ಟಲು
ಮೋದದುದ್ಧರಿಸಿದೆ ಮಾಧವ ಅವನನ್ನು || ೪ ||

ಶ್ರೀದವಿಠಲ ನಿನ್ನ ಪಾದಾಶ್ರಿತರ
ಮೋದದಿ ಸಲಹೋ ಆದರಿಸೆನ್ನನು || ೫ ||

-----

ರಾಗ -- ಹಿಂದೂಸ್ಥಾನಿಕಾಫಿ ತಾಳ -- ಅಟ

ದೀನಬಂಧೋ ಹೇ ಭಲಾ ನೀನೇ ಸೈ ಸೈಯಲಾ || ಪ ||

ಪಾಸಲೆ ಶರಣರ ಪೊರೆವದಕಿನ್ನು
ಬ್ಯಾಸರೇನಿಲ್ಲಲ್ಲಾ || ೧ ||

ದುಷ್ಟರ ದಂಡಿಸಪಾ ಮನಸಿಗೆ
ಹುಟ್ಟದೆ ಕಲಕಲಾ || ೨ ||

ಬಿಡದೆ ಶ್ರೀದವಿಠಲಾ ಎನ್ನೊಳು
ಮಾಡಿದೆಲೊ ಛಲಾ || ೩ ||

-----

ರಾಗ -- ತೋಡಿ ತಾಳ -- ಆದಿ

ಭಯ ಕೃತ ಭಯಹಾರೀ ರಾಧಾ
ನಯನೋತ್ಸವಕಾರೀ || ಪ ||

ತಾಪತ್ರಯಪರಿಹಾರಕ ರಂಗಾ
ಗೋಪೀಜನಹೃತ್ಪದ್ಮಪತಂಗಾ || ೧ ||

ಸುಂದರ ಸುಸ್ಮಿತ ಶೋಭಿತ ವದನಾ
ಮಂದರಧರ ಮಾಧವ ಜಿತಮದನಾ || ೨ ||

ದುಷ್ಟಕುಲಾಂತಕ ಧರೆಯೊಳು ಶ್ರೀದ-
ವಿಠಲ ವಿಧಿಭವವಂದಿತಪಾದ || ೩ ||

-----

ರಾಗ -- ಪೀಲು ತಾಳ -- ಆದಿ

ನಾರಾಯಣ ಗೋವಿಂದ ಹರಿ ಹರಿ| ನಾರಾಯಣ ಗೋವಿಂದ || ಪ ||

ನಾರಾಯಣ ಗೋವಿಂದ ಮುಕುಂದ| ಪರತರ ಪರಮಾನಂದ || ಅ.ಪ. ||

ಮಚ್ಛರೂಪಿಲಿಹೆಚ್ಚಿದ ದೈತ್ಯರ| ತುಚ್ಛಿಸಿ ವೇದವತಂದ ಹರಿ || ೧ ||

ಸ್ವಚ್ಛ ಮಂದರ ಯದೃಚ್ಛದಿ ಮುಣುಗಲು |
ಕಚ್ಛಪ ವೇಷದಿ ನಿಂದಾ ಹರಿ || ೨ ||

ಶ್ರೀಕರ ಹರಿ ಭೀಕರ ದಿತಿಜರ |
ಸೂಕರ ರೂಪಿಲಿ ಕೊಂದಾ ಹರಿ || ೩ ||

ಶಂಬರಾರಿ ಪಿತ ಕಂಬು ಚಕ್ರಧರ |
ಕಂಬವ ಭೇದಿಸಿ ಬಂದ ಹರಿ || ೪ ||

ಶ್ಯಾಮರೂಪ ಗುಣಧಾಮ ಹರಿಯು ತಾ |
ವಾಮನ ರೂಪಿಲಿ ನಿಂದಾ ಹರಿ || ೫ ||

ಕ್ಷತ್ರಕುಲವ ನಿಕ್ಷತ್ರಮಾಡಲು ಭೃಗು |
ಪುತ್ರನಾಗಿ ತಾ ನಿಂದಾ ಹರಿ || ೬ ||

ದಶರಥ ಸುತ ಹರಿ ದಶಮುಖನಳಿದು |
ಕುಶಲದಿ ಸೀತೆಯ ತಂದಾ ಹರಿ || ೭ ||

ನಂದಗೋಪನ ಕಂದನು ಬಹು ಗೋ |
ವೃಂದದೊಳಗೆ ತಾನಿಂದಾ ಹರಿ || ೮ ||

ಅಂಗನೆಯರ ವ್ರತ ಭಂಗ ಮಾಡಲ- |
ನಂಗ ಜನಕ ತಾ ಬಂದಾ ಹರಿ || ೯ ||

ದುಷ್ಟರ ನಳಿದು ಶಿಷ್ಟಜನರ ಪರ- |
ಮೇಷ್ಠಿ ಎನಿಸಿ ತಾ ನಿಂದಾ ಹರಿ || ೧೦ ||

ಶ್ರೀದವಿಠಲ ಕರುಣದಿಂದಲಿ |
ನಂದತತಿ ಸಲಹುವೆನೆಂದಾ ಹರಿ || ೧೧ ||

-----

ರಾಗ -- ತೋಡಿ ತಾಳ -- ಏಕ

ಯದುಪತಿ ನಮಗಾಗಲಿ | ನಿನ್ನಲಿ ರತಿ || ಪ ||

ತನುಮನ ಧನ ನಿನಗೊಪ್ಪಿಸಿ ನಲಿವಾ |
ಅನುಭವಿಗಳ ಸಂಗತೀ || ೧ ||

ಶರಣಾಗತ ಪರಿಪಾಲಕನೆಂದೂ |
ಮರೆಯದೆ ಇಂಥಾ ಮತಿ || ೨ ||

ಸ್ವಾಂತ ಧ್ವಾಂತ ಶ್ರೀದವಿಠ್ಠಲಾ |
ಪ್ರಾಂತಕೆ ನೀನೇ ಗತೀ || ೩ ||

-----

ರಾಗ -- ಪೀಲು ತಾಳ -- ಅಟ

ಕಾಯೋ ಶ್ರೀ ಹರೀ || ಪ ||

ಕೈಮುಗಿವೇ ಮುರಾರೀ ಕರುಣದಿ || ಅ.ಪ. ||

ನೊಂದೆನು ಈ ಭವ ಬಂಧನದೊಳಗೆ ಶಿಲುಕಿ |
ಮುಂದಿದಕೇನು ದಾರಿ || ೧ ||

ತುಂಬಿದ ಭಕ್ತ ಕುಟುಂಬಿ ನಾಚಿಕೆಯ |
ಕೊಂಬುವದೇನಿದಕುಸುರೂ || ೨ ||

-----

ರಾಗ -- ಆನಂದಭೈರವಿ ತಾಳ -- ಆದಿ

ರಾಮಚಂದ್ರ ನೀನೇ ಪಾಲಿಸೊ ಸರೋಜನಾಭ
ಸಾಧುಸಂಗ ಶೀಘ್ರಕೊಡಿಸೋ || ಪ ||

ಎಷ್ಟುದಿನ ಕಷ್ಟಪಡುವದೋ ಈ ಭವದೊಳು
ಈಸಲಾರೆನಯ್ಯ ಹರಿಯೇ
ಇಷ್ಟುದಿನ ಇದ್ದಂತೆ ಇರಲಾರೆನೆಂದು ಕರವ
ಮುಟ್ಟಿ ಮುಗಿದು ಬೇಡಿಕೊಂಬೆ ಮುರಾರಿ ಕೃಷ್ಣ ನೀನೇ ಕಾಯೋ || ೧ ||

ಹರಿಹರರ ಸಮಾರೆನ್ನದಾ ಈ ಸಜ್ಜನರಾ-
ಸಂಗದಿಂದ ಹೀನಾ ನಾನಾದೆ
ಇನ್ನುಮ್ಯಾಲೆ ಇಲ್ಲವಯ್ಯ ಸೃಷ್ಟಿಗಧಿಕ ಶ್ರೀನಿವಾಸಾ
ಇನ್ನು ನಿನ್ನ ಸ್ಮರಣೆಯಿಂದ ಇರುವೆನಯ್ಯ ಮುಕುಂದ || ೧ ||

ಪೃಥ್ವಿಯಲ್ಲಿ ಪುಟ್ಟಿದಾ ಮೊದಲು ನಿನ್ನಾ ವೃತ್ತಾಂತ
ಒಂದುದಿನ ಮಾಡಲಿಲ್ಲವೋ
ಎಂದು ಎನ್ನಮ್ಯಾಲೆ ಕ್ರೂರದೃಷ್ಟಿಯಿಂದಾ ನೋಡಾದೀರು
ವಾಸುದೇವ ವೈಕುಂಠವಾಸ ಲಕ್ಷುಮಿ ರಮಣ || ೩ ||

ನಿತ್ಯದಲ್ಲಿ ವಿಪ್ರರಾವೃಂದಾದೊಳಗೆ ನಾ ಆ-
ಸಕ್ತನಾಗಿ ಇರುವೆ ಮುಕುಂದಾ
ಎಂಥ ಪಾಪಿ ಎಂದು ಉದಾಸೀನಮಾಡಿ ನೋಡಬೇಡ
ನಿನ್ನ ಕಂದಾನೆಂದು ತಿಳಿದು ಪಾಲಿಸಯ್ಯ ನಾರಾಯಣಾ || ೪ ||

ಹನುಮ ಭೀಮ ಮಧ್ವೇಶಾರಿಂದಾ ಸೇವಿತ ಪ್ರಿಯಾ
ಶಾಂತಮೂರ್ತಿ ಶಾಮವರ್ಣನೇ
ಶ್ರೀದವಿಠಲೇಶಾ ನಿನ್ನಾ ದಾಸನೆಂದು ಪಾಲಿಸೆನ್ನ
ಸಾರಿ ಬೇಡಿಕೊಂಬೆನಯ್ಯ ರಾಮಚಂದ್ರ ರಾವಣಾರಿ || ೫ ||

-----

ರಾಗ -- ಮೋಹನ

ಇನ್ನಾತಕನುಮಾನವಯ್ಯಾ

ಅನ್ಯಥಾಗತಿಕಾಣೆ ನಿನ್ನ ಚರಣಗಳಾಣೆ

ನಾಶರಹಿತನೆ ನಮಗೆ ಏಸೇಸು ಕಲ್ಪಕ್ಕು
ವಾಸ ಏಕತ್ರದಲ್ಲಿ
ನೀ ಸಾಕ್ಷಿಯಾಗಿದ್ದು ದಾಸನಾದವಗಪ್ರ
ಯಾಸದಿ ಫಲಗಳುಣಿಸಿ
ಲೇಶ ಘನಮಾಡಿ ಸಂತೋಷಪಡುವಾ ನಿನ್ನ
ದ್ವೇಷಿ ನಾನಲ್ಲವಯ್ಯ
ದೇಶಕಾಲಾದಿಗಳಿಗೀಶ ನೀನೆಂದರಿದು
ದಾಸನಾಗಿರುವೆನೆಂದಾಶೆ ಪುಟ್ಟಿದ ಬಳಿಕ

ನಿತ್ಯತೃಪ್ತನೆ ನಿನ್ನ ಕೃತ್ಯಕೇನೆಂಬೆನೋ
ಸತ್ಯಸಂಕಲ್ಪ ಹರಿಯೇ |
ಮೃತ್ಯು ಮಾರಿಗಳೆನಗೆ ಹತ್ತಿಕೊಂಡದರಿಂದ
ಸತ್ತು ಪುಟ್ಟುವೆಯಿನ್ನು |
ದತ್ತ ಕರ್ತೃತ್ವ ದೆನ್ನತ್ತಿಕೊಂಡದರಲ್ಲಿ
ಚಿತ್ತೈಸೊ ಎನ್ನ ಮಾತಾ |
ಅತ್ಯಪರಾಧಿಯಂದತ್ತ ಮೊಗದಿರುಗದಿರು
ಭೃತ್ಯವತ್ಸಲನೆಂದಗತ್ಯ ಮನಸೋತಬಳಿಕ

ವೇದವೇದ್ಯ ಸ್ವಗತ ಭೇದವರ್ಜಿತ ಪೂರ್ಣ
ಬೋಧರ್ತಿರ್ಥಾರ್ಯರಾಪ್ತಾ |
ಯಾದವಕುಲೋತ್ತಂಸ ಮಾಧವ ಮಹಿದಾಸ
ಬೋಧಮಯ ಧನ್ವಂತ್ರೀ |
ಆದಿನಾರಾಯಣ ವಿನೋದ ವಿಷ್ವಕ್ಸೇನ
ತೋದಕ ಕ್ಷೇಮಧಾಮಾ |
ಶ್ರೀದವಿಠಲಾ ನಿನ್ನ ಕ್ರೋಧವರರೂಪ
ವಾದ ವಾರ್ತೆಯು ಕೇಳಿ ಧೈರ್ಯಬಿಡದಾ ಬಳಿಕಿನ್ನು

ಜೋ ಜೋ ಜೋ ಮಲಗೋ | ಮುಕುಂದಾ || ಪ ||

ಮುಸುಕು ತೆಗೆಯ ಬ್ಯಾಡೆಲೊ ಮನೆಗೆಲಸಾ |
ಹಸನಾಗದು ಗೋಪಾಲ || ಕೃಷ್ಣ || || ೧ ||

ಮೆಲ್ಲನೆ ಮಾತನಾಡುವಿಯಾ ನೋಡುವಿಯಾ |
ಸೊಲ್ಲಲಾಲಿಸುವಿಯ ಕಂದ || ಕೃಷ್ಣ || || ೨ ||

ತೊಟ್ಟಿಲ ತೂಗುತ ನಿಂತರೆ ಶ್ರೀದ
ವಿಠಲಾ ನಿನಗಾನಂದಾ || ಕೃಷ್ಣ || || ೩ ||

-----

ರಾಗ -- ನವರೋಜು ತಾಳ -- ಮಿಶ್ರಛಾಪು

ಬರುವೆಯೋ ರಂಗಯ್ಯಾ ಮನೆಗೆ |
ಬಾರೋ ಹೋಗುವ || ಪ ||

ಬೋಗರಿ ಚಂಡುಗಳ ಕೊಡುವೆನು ಬಂದರೆ |
ಬಗೆ ಬಗೆ ಆಟವ ಕಲಿಸಿ ಒಲಿಸುವೆನು || ೧ ||

ರಸ ರಸಾಯನಗಳುಣ್ಣಿಸುವೆ ಬಂದರೆ |
ಮುಸುಕಿನೊಳಗೆ ಬಚ್ಚಿಟ್ಟುಕೊಂಬುವೆನು || ೨ ||

ಶ್ರೀದವಿಠ್ಠಲನೆ ಬಂದರೆ ನಿನಗೆ |
ಸಾದರದಲಿ ಸವಿಮಾತನ್ಹೇಳುವೆನು || ೩ ||

-----

ರಾಗ -- ಬೇಹಾಗ್ ತಾಳ -- ಆದಿ

ಎಲ್ಲ್ಯಾಡಿ ಬಂದ್ಯೊ ಮುದ್ದುರಂಗಯ್ಯ ನೀ || ಪ ||

ಎಲ್ಲಾಡಿ ಬಂದ್ಯೊ ಎನ್ನ ಕಣ್ಣಮುಂದಾಡದೆ || ಅ.ಪ. ||

ಆಲಯದೊಳಗೆ ನೀನಾಡದೆ ಬೆಣ್ಣೆ
ಪಾಲುಸಕ್ಕರೆಯ ನೀ ಮೆಲ್ಲದೆ ಚಿಕ್ಕ
ಬಾಲೆಯರೊಳು ನೀನಾಡದೆ
ಬಾಲಯ್ಯ ನೀ ಎನ್ನ ಕಣ್ಣಮುಂದಾಡದೆ || ೧ ||

ಬಟ್ಟಮುತ್ತಿನ ಬೊಗಸೆ ಕಂಗಳು ಫಣಿಯೊ-
ಳಿಟ್ಟ ಕಸ್ತೂರಿ ತಿಲಕ ಗಂಧವು ಅಷ್ಟ
ದಿಟ್ಟತನದ ಲೋಲ್ಯಾಟವು
ಕೃಷ್ಣಯ್ಯ ನೀ ಎನ್ನ ಕಣ್ಣಮುಂದಾಡದೆ || ೨ ||

ಅಷ್ಟದಿಕ್ಕಿಲಿ ಅರಸಿ ಕಾಣದೆ ಭಾಳ
ದೃಷ್ಟಿಗೆಟ್ಟೆನೊ ನಿನ್ನ ನೋಡದೆ ಇ-
ನ್ನೆಷ್ಟು ಪೇಳಲಿ ಕೇಳಬಾರದೆ ಶ್ರೀದ
ವಿಠಲ ನೀ ಎನ್ನ ಕಣ್ಣಮುಂದಾಡದೆ || ೩ ||

-----

ರಾಗ -- ನವರೋಜು ತಾಳ -- ರೂಪಕ

ಆಡ ಹೋಗುವ ಬಾರೋ ರಂಗ || ಪ ||

ಆಡಹೋಗುವ ಬಾರೊ ರಂಗ
ಕೂಡಿ ಕಾಳಿಂದಿ ತೀರದಲ್ಲಿ
ನಾಡಗೊಲ್ಲರ ಹೆಂಗಳಿಗೆಲ್ಲ
ಬೇಡಿದಿಷ್ಟಾರ್ಥಗಳ ಕೊಡುವ || ಅ.ಪ. ||

ಆಣೆಕಲ್ಲು ಗೋಲಿ ಗಜುಗ
ಚಿಣ್ಣಿಕೋಲು ಚಂಡು ಬುಗುರಿ
ಕಣ್ಣುಮುಚ್ಚಾಲೆ ತುಂಟ ಹಲಪೆ
ಬಣ್ಣ ಬಣ್ಣದಾಟಗಳನು || ೧ ||

ಸೋಲುಗೆಲುವಿಗೆಲ್ಲ ನೀನೆ
ಪಾಲುಗಾರನಾಗಿ ನಮ್ಮ

ಮೇಲೆ ಮಮತೆ ಇಟ್ಟು ಸಾನು-
ಕೂಲನಾಗಿ ಕೈಯ್ಯ ಪಿಡಿಯೊ ||೨||

ಮೆಟ್ಟು ಮೆಟ್ಟು ಕೋಲು ಕೈಲಿ
ಕಟ್ಟಿ ಬುತ್ತಿ ಕೊಳಲು ಕಂಬಳಿ
ಧಿಟ್ಟ ಗೋವಳರಾಯ ಶ್ರೀದ-
ವಿಠಲಯ್ಯ ಯಾಕೆ ತಡವೋ ||೩||

-----

ರಾಗ -- ಯಮುನಾಕಲ್ಯಾಣಿ ತಾಳ -- ಛಾಪು

ಮುಟ್ಟಗೊಟ್ಟ ನೀನಮ್ಮ ಎಲೊ ಎಲೊ ಮುರಾರಿ
ನೀನಮ್ಮ ಛೇಛುಮ್ಮ ಎಲೊ ಎಲೊ ||ಪ||

ಮಡಿಯನುಟ್ಟು ಮೈತೊಳೆದು ಬಂದಿಹೆವೊ
ಕೊಡಬ್ಯಾಡೆಂಜಲುಗಳ ನೀ ಬಹುಸುಳ್ಳ ||೧||

ನಿಜಪತಿವ್ರತೆಯರು ನಾವಲ್ಲವೇನೋ
ವ್ರಜವನಿತಾಜನಜಾರ [2]ನೀ ಬಲು ಚೋರ ||೨||

ಸೋದರತ್ತೆಮಗ [3]ನೀನಮಗಲ್ಲ
ಶ್ರೀದವಿಠಲ ಬಿಡು ಹಾದಿ ಸುಮ್ಮನೆ ಹೋದೀ ||೩||

-----

ರಾಗ -- ಬೇಹಾಗ್ ತಾಳ -- ಆದಿ

ತಾರೊ ನಮ್ಮ ಭಂಡಿಯ ಗೋಪಾಲಕೃಷ್ಣ
ತಾರೊ ನಮ್ಮ ಭಂಡಿಯ ||ಪ||

ಅತ್ತರೇನು ಕಂಗಳಿಂದ ಮುತ್ತುಸುರಿಯೊದಿಲ್ಲೊ ರಂಗ
ಮತ್ತೆ ನಮ್ಮ ಮ್ಯಾಲೆ ಭಂಡಿ ಹೊತ್ತರೆ ನೀ ಬಿಟ್ಟಿಯೇನೊ ||೧||

---

[2] ಗೋರಸ ಚೋರ.
[3] ನೀ ನಮಗೇನೋ?

ವಾರಿಜಾಕ್ಷ ನಿನ್ನ ಬಡಿವಾರವೇನೊ ಬೆನ್ನಮೇಲೆ
ಹಾರಿ ಹತ್ತಿಕೊಂಡು ಭಾರಹೇರದೆ ನಾವು ಬಿಟ್ಟೆವೇನೊ || ೨ ||

ಕೊಟ್ಟುಹೋಗೆಂದರ್ಯಾಕೆ ಸಿಟ್ಟುಮಾಡುವಿಯೊ ಶ್ರೀದ-
ವಿಠಲ ಕೂಡ್ಯಾಡಿದವ್ಯಾಲೆ ಬಿಟ್ಟರೆ ನಾವು ಬಿಡುವೊರಲ್ಲ || ೩ ||

-----

ರಾಗ -- ಶ್ರೀರಂಜಿನಿ ತಾಳ -- ಆದಿ

ಕೊಳಲೂದೋ ಇನ್ನೊಮ್ಮೆ ರಂಗಯ್ಯಾ |
ಕೊಳಲೂದೋ ಇನ್ನೊಮ್ಮೆ ಕೃಷ್ಣಯ್ಯ || ಪ ||

ಕೊಳಲೂದೋ ದ್ವಾರಕಾಪುರ ನಿಲಯಾ || ಅ.ಪ. ||

ಎಡ ಹೆಗಲಲ್ಲೆಡಗಲ್ಲವ ನೀಡೀ |
ಕುಡಿ ಹುಬ್ಬುಗಳಲ್ಲಾಡಿಸುತ್ತ || ೧ ||

ಮೃದುತರ ತುದಿ ಬೆರಳಿಂದೊತ್ತುತ|
ಮಧುರಾಧರದಲ್ಲಿಟ್ಟು ರಂಗಯ್ಯ || ೨ ||

ನಾದ ಮೂರುತಿ ಗೋಪೀಜನ ಲೋಲಾ |
ಶ್ರೀದವಿಠ್ಠಲ ಗೋಪಾಲ ಬಾಲ || ೩ ||

ವಾಮ ಬಾಹು ಕೃತ ವಾಮಕಪೋಲೋ
ವಲ್ಗಿತಭ್ರೂದರಾರ್ಪಿತವೇಣುಃ
ಕೋಮಲಾಂಗುಲಿಭಿರಾಶ್ರಿತಮಾರ್ಗಂ
ಗೋಪ ಈರಯಿತಿ ಯತ್ರ ಮುಕುಂದಃ

------

ರಾಗ -- ಕಲ್ಯಾಣಿ ತಾಳ -- ಆದಿ

ಮುಚ್ಚದಿರೆಲವೊ ಮುರಾರಿ | ಕಣ್ಣ || ಪ ||

ಮಂಗಳಕರ ಮಕರಂದ ಸೂಸುತಲಿರೆ |
ಕಂಗೊಳಿಸುವರೋ ಕಯ್ಯಾರಿ ಕೃಷ್ಣ || ೧ ||

ಮುತ್ತಿನಹಾರಾ ಪದಕ ಮುದ್ರಿಕೆಯೂ |
ಒತ್ತುತ ಲಿವ್ಹೋ ಬೆರಳೂರಿ || ೨ ||

ಸುಲಭರ ರಸ ಕೇಳು ಶ್ರೀದವಿಠ್ಠಲನೆ |
ಸುಳುವು ಕಂಡೆನು ಬಿಡು ಶೌರಿ || ೩ ||

-----

ರಾಗ -- ಖರಹರಪ್ರಿಯ ತಾಳ -- ಛಾಪು

ಹಾಗಾದರು ನಾ ಬಿಡೆ ಕರದೊಯ್ಯೊ ರಾಧಾ-
ಶ್ರೀರಂಗನೆ ನೀನ್ಹ್ಯಾಗಾದರು || ಪ ||

ಹವಣಿಸಿ ನೋಡೆ ಬಂದೆನೆಂದೊ
ತವ ವದನಾಂಬುಜಭೃಂಗನಾ || ೧ ||

ಮುಖ ಮುಖ ನಿನ್ನನೆ ನೋಡುವನಿದಕೋ
ಪ್ರಕಟಿತ ಕರುಣಾಸಾಗರಾ || ೨ ||

ತೊಟ್ಟಿಲೊಳಗೆ ತರಹರಿಸಲು ಶ್ರೀದ
ವಿಠಲ ದೇವೋತ್ತುಂಗನೇ || ೩ ||

-----

ರಾಗ -- ಕಲ್ಯಾಣಿ . ತಾಳ -- ಆದಿ

ಗಂಡ ಬಂದನೆಲೋ ರಂಗಾ ಎನ್ನ
ಗಂಡ ಬಂದನೆಲೋ ರಂಗಾ || ಪ ||

ಕಂಡರೆ ಒಗತನ ಭಂಗಾ - ಎನ ಗಂಡ || ಅ.ಪ. ||

ಬಾಗಿಲ ತೆಗೆಯೆಂದಾರ್ಭಟದಲಿ
ಕೂಗುವ ಧ್ವನಿಕೇಳ್ಳೈ ಇದಕೋ
ಹ್ಯಾಗೆಮಾಡಲಿ ಹಾದಿಯಮನೆ ಎನ-
ಗಾಗದವರು ಬಂದೀಗ ನಗುವರೆನ್ನ || ೧ ||

ನಂದಗೋಕುಲದಿ ನಾನೇ ಗರತಿಯು
ಎಂದು ಮೆರೆಯುತ್ತಿರಲೀಗ
ಬಂಧುಬಳಗದೊಳು ಭಂಡಾಳಾಗಿ ಎಂ-
ದೆಂದಿಗು ತಲೆ ಎತ್ತಿ ತಿರುಗದಂತೆ ಎನ್ನ || ೨

ದಕ್ಕಲಿಲ್ಲ ಮನದೊಳಗೆ ಮಾಡಿ ಕೊಂ-
ಡಕ್ಕರ ತೀರಲಿಲ್ಲವು ಮುನ್ನಾ
ಘಕ್ಕನೆ ಗೋವಳ ಬರಬಹುದೇ ಒಳ-
ಸಿಕ್ಕಿದೆವಲ್ಲವೊ ಶ್ರೀದವಿಠಲ ಎನ್ನಾ || ೩

-----

ರಾಗ -- ನವರೋಜು ತಾಳ -- ಆ

ಆಯ್ಯಾ ಸಾಕಿದೇನು ಚಂದಾ ಮೈ
ಸೋಕದಿರೆಲೊ ಮುಕುಂದ || ಪ

ಗಂಡನುಳ್ಳ ನಿಜಗರತೀ ಒಡ-
ಗೊಂಡು ಬದಿಗೆ ಕೈ ತರುತೀ ಬಲು
ಪುಂಡಾಟಗಳ ನೀ ನೆಸಗುತೀ || ೧

ಹೆಚ್ಚು ನುಡಿಯದಿರು ನಂಟೂ ಕಂಡು
ಹುಚ್ಚುಮಾಡುವದುಂಟೂ ನಡೆ
ಬಿಚ್ಚದಿರೆಲೊ ಮೊಲೆಗಂಟೂ || ೨

ಶ್ರೀದವಿಠಲ ಯದುರಾಯಾ ನಿನ್ನ
ಪಾದಕೆರಗುವೆನಯ್ಯಾ ನಡು-
ಬೀದಿಯೊಳಗೆ ಬಿಡು ಕೈಯ್ಯಾ || ೩

-----

ರಾಗ -- ನವರೋಜು ತಾಳ -- ಆದಿ, ಧಾ

ಬಿಡೊ ಬಿಡೊ ಬಡಿವಾರಾ ಬೀರದಿರು
ನಡಿ ನಡಿ ಹೋಗೈ ಸಾಕು || ಪ

ಪುಂಡಾಟಿಕೆ ಯಾರಿಗೆ ಬೇಕೋ

ತಕ್ಕ ಬುದ್ಧಿಹೇಳುವರಿಲ್ಲವೆ ನಿ-
ನ್ನಕ್ಕ ತಂಗಿಯರನೆ ಸೋಕೋ

ಶ್ರೀದವಿಠಲ ಸುಮ್ಮನೆ ಹೋಗದೆ ನಡು
ಬೀದಿಯೊಳಗೆ ಮಾಡೊರೆ ಹೋಕು

-----

## ಲಾವಣಿಪದ

ರಾಗ -- ನವರೋಜು ತಾಳ -

ದಾರ್ಮ್ಯಾ ದೂರನಿಲ್ಲು ದಾರಿಕಟ್ಟಿ ಬರದಿರು |
ಯಾರಿಗಾಗಿ ಮಾರಬಂದೆ ಹಾಲ್ ಮೊಸರಾ ಹೇಳ್ ನಿನ್ನ ಹೆಸರಾ |
ದೂರ್ ದ್ದೂರಲ್ಲ ಕೋಲ್‌ಕಾರ ಕೃಷ್ಣ ಕೇಳು ಬಾಲೆ
ದಾರಿಯೋಳ್ ಸುಂಕ ಶೋದಗಳುಂಟೂ ಇದು ಏನ್ ಗಂಟು

ಗಂಡನುಳ್ಳ ಬಾಲೆಯರ ದುಂಡಕುಚ ಮುಟ್ಟಲಿಕ್ಕೆ
ಪುಂಡತನ ಬುದ್ಧಿಯಿದು ಥರವೇನೋ ಜೀವ ಯರವೇನೋ |
ಪುಂಡತನ ಬುದ್ಧಿಯಿದು ಥರವೇನೆಂದರೆ
ಹೆಂಡತೆಂತ ಮುಟ್ಟಿದಾಗ ಕುಚಯುಗವಾ ಕಾಣದೆ ನಗುವ

ಯಾಕೆ ಮಾತಾಡುತಿದ್ದಿ ಕಾಕುಮಾತಾಡುತಿದ್ದಿ
ಸಾಕು ನಿನ್ನ ಮಾತೀಗ ಸಲುಗೇನೋ ನಿನ್ನ ನಗೆ ಏನೋ |
ಸಾಕು ನಿನ್ನ ಮಾತೀಗ ಸಲುಗೇನೆಂದರೆ
ಬೇಕು ಬೇಡಿದ್ದುನಾ ಕೊಡುತೇನೆ ನಿನ್ನಿಡುತೇನೇ

ಕೊಂಡು ಕೊಂಡು ನಡೆಸಲಿಕ್ಕೆ ಶೆಟ್ಟಿಗಾರ ನಾನಲ್ಲ
ನೀ ನಿಟ್ಟುಕೊಂಡ ಸೂಳೆ ನಾನಲ್ಲ ಹೋಗೋ ನೀ ನಲ್ಲ ಸಾಗೋ |
ಇಟ್ಟುಕೊಂಡ ಸೂಳೆ ನಾನಲ್ಲ ಹೋಗೆಂದರೆ
ಕಟ್ಟಿಕೊಂಡುಹೋದೇನು ಒಳತನಕಾ ಬೆಳ ಬೆಳತನಕಾ

ಒಳತನಕ್ಯಾತಕೆ ಬೆಳತನಕ್ಯಾತಕೆ
ತಿಳಿಯಲಿಲ್ಲಾ ಮಾತಿನ ಬೆಡಗಾ ಅಹುದೆಲೊ ಹುಡುಗ |
ತಿಳಿಯದಿದ್ದರೆ ನಾ ತಿಳಿಯ ಹೇಳಿಕೊಡುವೆನೆಂದು
ಸೆಳದಪ್ಪಿಕೊಂಡ ಶ್ರೀದವಿಠಲ ಬಹು ಬಹು ಧಿಟಲಾ || ೫ ||

-----

ರಾಗ -- ಪೂರ್ವಿ ಕಲ್ಯಾಣಿ ತಾಳ -- ಆದಿ

ಗೋಪಿ ನಿನ್ನ ಮಗ ಬಲು ಜಾರ ಚೋರಾ || ಪ ||

ಮುದದಿ ಮುಕುಂದಾ| ಸದನಕೆ ಬಂದಾ |
ದಧಿಯ ಮಿಾಸಲ ಬೆಣ್ಣೆ ತಿಂದ ತಿಂದ || ೧ ||

ಹರೆಯದ ಪೋರೀ ಜರದ ಕಂಗೋರೀ |
ಭರದಿಂದ ಶಳೆದನು ಶೀರಿ ಶೌರಿ || ೨ ||

ಭಾಳದಿನಾಯಿತು ಪೇಳುವ ದ್ಯಾಂಗೆ ಗೋ-|
ಪಾಲನ ಮನ ಸೊಮ್ಮೆ ಹಾಗೆ ಹೀಗೆ || ೩ ||

ಮಾರಜನಕ ತಾನು ಮನೆಯೊಳು ಪೊಕ್ಕಾ |
ಹಿಡಿಯಲು ಹೋದರೆ ಕೈಗೆ ಸಿಕ್ಕನಕ್ಕ || ೪ ||

ಶ್ರೀದ ವಿಠ್ಠಲ ಪೊಷಿಪ ನೆಲ್ಲ |
ಭೂಸುರ ನಾಟ್ಯವೆಲ್ಲ ಬಲ್ಲ ಬಲ್ಲ || ೫ ||

-----

ರಾಗ -- ಕಾಪಿ ತಾಳ -- ಮಟ್ಟೆ

ತಿಲಕದ ಒಲುಮೆ ಮೇಲು ರಾಧೇ ನಿನ್ನ
ತಿಲಕದ ಒಲುಮೆ || ಪ ||

ತಿಲಕದ ಒಲುಮೆ ಹರಿ ಬಂದ ಒಲುಮೆ |
ಘಿಲು ಘಿಲುಕು ಗೆಜ್ಜೆ ಕಾಲು ರಾಧೇ ನಿನ್ನ || ಅ.ಪ. ||

ಕುಂಕುಮ ಕರದು ಹಚ್ಚಿ ವಂಕಿ ಬಾಜು ಬಂದಿ ಇಟ್ಟು |
ಪಂಕಜಾಕ್ಷ ನೆತ್ತಿಕೊಂಡೊ ತೋಳು ರಾಧೇ ನಿನ್ನ || ೧ ||

ಉಟ್ಟಿದು ಪೈಠಣಿ ಶೀರೆ ತೊಟ್ಟಿದು ಬುಟ್ಟಿದ ಕುಪ್ಪಸ |
ಮುಟ್ಟಿದರೆ ಮಾಸುವದು ಶಾಲ ರಾಧೇ ನಿನ್ನ || ೨ ||

ಮಂಗಳ ಸೂತ್ರವು ಬೆಳದಿಂಗಳು ಪೊಳೆವಂತೆ |
ತೆಂಗು ಬ್ಯಾಳಿ ಮಣಿ ಯೆಣ್ಣೆ ನೂಲು ರಾಧೇ ನಿನ್ನ || ೩ ||

ಪಿಲ್ಯ ಕಾಲುಂಗುರ ಕಿರುಬಲ್ಯ ಆಣೆಮೆಂಟು |
ಧೈರ್ಯಾದಲಿ ಮೆರೆವ ಗಿಳಿಗೇಲು ರಾಧೇ ನಿನ್ನ || ೪ ||

ಚೌರಿ ರಾಗಟಿ ಗೊಂಡ್ಯ ಹೆರಳು ಭಂಗಾರವೂ |
ಚಂದಿರ ಪ್ರಫುಲ್ಲ ಮುತ್ತಿನ ಬೊಟ್ಟು ರಾಧೆ ನಿನ್ನ || ೫ ||

ದಿಟ್ಟ ಹಗಲೊಳು ಶ್ರೀದವಿಠಲನ್ನ ಯೇರಿಕೊಂಡು |
ಬಟ್ಟ ಬಯಲೊಳಗೆ ಕೇಳೇ ರಾಧೆ ನಿನ್ನ || ೬ ||

------

ರಾಗ -- ಧನ್ಯಾಸಿ (ಧನಾಸರಿ) ತಾಳ -- ಝಂಪೆ

ರಥ ಹೋಗದಮುನ್ನೆ ಗೋಕುಲಕೆ ಮನ್ಮನೋ-
ರಥ ಹೋಗಿರುವುದೇನೆಂಬೆ || ಪ ||

ಅತಿ ಕೌತುಕವದಾಯ್ತು ಖಳರಾಯನೊಲಿದು ಯದು-
ಪತಿಯ ಕರೆತರುವುದೆಂದೆನಗೆ ಪೇಳಿರಲಿಕ್ಕೆ || ಅ.ಪ. ||

ಪತಿತರ್ಗೆ ನಾಮ ದುರ್ಲಭವಲಾ ಎನಗೆ ಶ್ರೀ-
ಪತಿಸೇವೆ ತಾನಾಗಿ ದೊರೆದೂ
ಶತಸಹಸ್ರಾನಂತಾನಂತ ಜನುಮಗಳ ಸು-
ಕೃತಕೆ ಫಲವಾಯಿತೆಂದರಿದೂ
ಗತ ಕಿಲ್ಬಿಷನಾದೆನೆಂಬುದಕಿದೇ ಸಾಕ್ಷಿ

ಪಥದೊಳಗೆ ತಾವೆ ಮುಂದರಿದೂ
ಮಿತಿಯಿಲ್ಲದಲೆ ಮಹಾ ಶಕುನಂಗಳಾಗುತಿವೆ
ಪ್ರತಿಯಿಲ್ಲವೀ ಶುಭೋದಯಕೆ ಸೂರ್ಯೋದಯಕೆ || ೧ ||

ಶ್ರೀಪದ್ಮಜಾದಿಗಳು ಸೇವಿಸುವ ಚರಣ ಯಮು-
ನಾಪುಳಿನದಲಿ ಮೆರೆವ ಚರಣ
ಗೋಪಿಯರ ಪೀನಕುಚಕುಂಕುಮಾಂಕಿತ ಚರಣ
ತಾಪತ್ರಯಾವಳಿವ ಚರಣ
ಗೋಪುರದ ಶಿಲತೃಣಾಂ ಕುರುಹ ತೋರುವ ಚರಣ
ಆಪದ್ಬಾಂಧವನ ಚರಣ
ನಾಪೇಳಲೇನು ಭಕುತವತ್ಸಲನು ಕರು-
ಣಾಪೂರ್ಣ ಎನಗಭಯ ಕೊಡುವ ಕರಪಿಡಿವ

ನೋಡುವೆನು ನೀರದಶ್ಯಾಮಸುಂದರನ ಕೊಂ-
ಡಾಡುವೆನು ಕವಿಗೇಯನೆಂದು
ಮಾಡುವೆನು ಸಾಷ್ಟಾಂಗ ದಂಡಪ್ರಣಾಮ ಕೊಂ-
ಡಾಡುವೆನು ಕೈಮುಗಿದು ನಿಂದು
ಬೇಡುವೆನು ಭುವನೈಕದಾತನೆಂದಲ್ಲಿ ಕೊಂ-
ಡಾಡುವೆನು ದಾಸ್ಯ ಬೇಕೆಂದು
ಈಡಿಲ್ಲ ಇಂದಿನಾ ಮನಕೆನ್ನ ಬಯಕೆ ಕೈ-
ಗೂಡುವದು ನಿಸ್ಸಂದೇಹ ದೈವಸಹಾಯ

ಇರುವನೊ ಏಕಾಂತದೊಳಗಿರುವ ಕೇಳಿದಿರು
ಬರುವನೋ ಬಂದವನ ಕಂಡು
ಕರೆವನೊ ಕಿರಿಯಯ್ಯ ಬಾರೆಂದು ಬಿಗಿದಪ್ಪಿ
ಬೆರೆವನೋ ಬೆರಸಿಯದನುಂಡು
ಒರೆವನೋ ಒಡಲ ಧರ್ಮವನೆಲ್ಲವರಗಿಸೀ
ಜರಿಯನೊ ಜಗದೀಶ ಹಗೆಯವನೆನುತ ಬಗೆಯ

ಗೋಧೂಳಿಲಗ್ನಕ್ಕೆ ಗೋಕುಲಕೆ ಬಂದು ಬೆರ-
ಗಾಗಿ ಹೆಜ್ಜೆಗಳ ನೋಡೀ
ಭೂದೇವಿಗಾಭರಣವೆನುತ ತೇರಿಳಿದು ಶ್ರೀ-
ಪಾದರಜದೊಳಗೆ ಹೊರಳಾಡೀ
ಗೋದೋಹನದೊಳಿದ್ದ ರಾಮಕೃಷ್ಣರ ಕಂಡು
ನಾಧನ್ಯಧನ್ಯನೆಂದಾಡೀ

ರಾಗ -- ಶಂಕರಾಭರಣ ತಾಳ -- ಅ

ಕೇಳಿದ್ಯಾ ಈ ಕೌತುಕ ಕೇಳಿದ್ಯಾ || ಪ

ಕೇಳಿದ್ಯ ಕೌತುಕವನ್ನು ಈಗ
ಪೇಳುವೆ ನಾ ನಿಮಗಿನ್ನು ಆಹಾ
ಹೇಳದೆ ಮಧುರೆಗೆ ಜಾಳಕಾರ ಕೃಷ್ಣ
ಕೋಳಿಕೂಗದ ಮುನ್ನ ನಾಳೆ ಪೋಗುವನಂತೆ || ಅ.ಪ

ಕರೆಯ ಬಂದಿಹನೊಬ್ಬ ಚೋರ ತನ್ನ
ಕಿರಿಯಯ್ಯನಂತೆ ಅಕ್ರೂರ ಊರ
ಹೊರಹೊಳಿಯಲಿ ಬಿಟ್ಟತೇರ ಆಹಾ
ಹಿರಿಯನೆಂದು ಕಾಲಿಗೆರಗೊ ರಾಮಕೃಷ್ಣರ
ಭರಧಿ ಅಪ್ಪಿಕೊಂಡು ಮರಳು ಮಾಡಿದ ಸುದ್ದಿ || ೧

ಸೋದರ ಮಾವನ ಮನೆಯೊಳ್ ಬೆಳ-
ಗಾದ ನಾಳಿನ ದಿನದೋಳ್ ಕೃಷ್ಣ
ಪೋದರೆ ನೆರೆದ ಜನರೋಳ್ ಆಹಾ
ಕಾದುವಮಲ್ಲರ ಮೇಲಾದ ಬಿಲ್ಲಬ್ಬ
ಸಾಧಿಸಿ ಸಮಯಕ್ಕೆ ಹೋದೆವೆಂಬ ಅರ್ತಿ || ೨

ಹುಟ್ಟಿದ ಸ್ಥಳವಂತೆ ಮಧುರೀ ಕಂಸ
ನಟ್ಟುಳಿಗಾಗಿ ತಾ ಬೆದರೀ ಇ-
ಲ್ಲಿಟ್ಟಳಾತನ ತಂಗಿ ಚದುರೀ ತೋರಿ
ಕೊಟ್ಟರೆ ತನ್ನನು ಬೆದರೀ ಆಹಾ
ಇಷ್ಟು ಸ್ನೇಹವು ಶ್ರೀದವಿಠಲ ಮಾವನ
ಭೆಟ್ಟಿಗಾಗಿ ಒಡಂಬಟ್ಟು ಹೋಗುವನಂತತೆ || ೩

-----

ಮಾತು ಹೇಳುವೆ ನಾ ನಿನಗೊಂದಾ ಪರಂ-
ಜ್ಯೋತಿ ಕಾಣುವನ್ನಕೀ ಬಂಧಾ
ಭೂತವೇತಾಳಾದಿಗಳಿಂದ ನಿನಗೆ
'ಭೀತಿ ಹುಟ್ಟುವದಿಲ್ಲೊ ಮತಿಮಂದಾ ॥ ೧ ॥

ಭೇದ ಭೇದಗಳು ನಿನಗೆಲ್ಲಿ ನೀ ಅ-
ನಾದಿ ನಿತ್ಯವೆಂಬುದು ಬಲ್ಲೀ ವೇದ[4]
ಬಾಹ್ಯನಾಗದೆ ಇಲ್ಲಿ ಹರಿ-
ಪಾದ ಇನ್ನಾಕೆ ಪೂಜಿಸಲೊಲ್ಲೀ ॥ ೨ ॥

ನೀನಲ್ಲ ನಿನದಲ್ಲವು ನೋಡಾದೇಹ
ನಾನು ನನ್ನದು ಎಂದೊರೆ ಮೂಢಾ ।
ಮಾನಹಾನಿ ಮಾಡಿಕೊಳ ಬೇಡಾ ಬಿಡು
ಸಾನು ಬಂಧಿಗಳ ಸ್ನೇಹವ ಗಾಢಾ ॥ ೩ ॥

ಆಹಿತಾದಿ ವಿಭೂತಿಯ ನೋಡು
ಸೋಹಂ ಎಂಬರೆ ವಿಘಾತಿಯಾ
ನೇಹವ ಪಡೆವರೆ ಗೀತೆಯಾ ಕೇಳಿ
ಮೋಹವ ಕಳಕೊ ವಿಜಾತಿಯಾ ॥ ೪ ॥

ಮಧ್ವವಲ್ಲಭ ಮಾಡಿದ ಗ್ರಂಥದೊಳ-
ಗದ್ವೈತತ್ರಯ ತಿಳಿದಂಥ ।
ವಿದ್ವಾಂಸರು ಚರಿಸುವ ಪಂಥವನ್ನು
ಸದ್ಭಕ್ತೆಯಲಿ ಸಾಧಿಸು ಭ್ರಾಂತ ॥ ೫ ॥

ಜಾಗರ ಸ್ವಪ್ನ ಸುಪ್ತಿಗಳೊಳು ವರ
ಭೋಗಿಶಯನ ರೂಪಗಳೇಳು ।
ಭಾಗವತ ಬಲ್ಲವರ ಕೇಳು ಬೃಹ
ದ್ಭಾಗವ ಹರಿಗರ್ಪಿಸಿ ಬಾಳು ॥ ೬ ॥

ಪಂಚಾತ್ಮಕ ಸಿಲುಕುವ ಸಟಿ ಪಂಚ-
ಪಂಚಕಿಗಳ ಕರ್ಮವ ಮಾಟಿ ।

---

[4] ವೇದ ಬಾಹ್ಯನಾಗದೆ ಇಲ್ಲಿಹರಿ - ಎಂಬುವುದು ಮೂರನೆ ಸಾಲು

ಪಂಚಕೆ ತಿಳಿದು ಕೊಂಡರೆ ಚಾಟಿ | ನಿಷ್ಪ್ರ-
ಪಂಚ ನಾಗಿ ನೀ ಕಡೆದಾಟಿ || ೭ ||

ಜ್ಞಾನೇಚ್ಛಾಕ್ರಿಯಾ ಶಕ್ತಿಗಳೆಂಬಾ ಈ ಮ-
ಹಾನುಭಾವದಿ ತನ್ನಯ ಬಿಂಬಾ |
ತಾನೆ ಸರ್ವತ್ರದಲಿ ಕಾಂಬ ಇದ-
ಕ್ಕೇನು ಸಂದೇಹವಿಲ್ಲವೊ ಶುಂಭಾ || ೮ ||

ತಾಪತ್ರಯಗಳು ನಿನಗಿಲ್ಲಾ ಪುಣ್ಯ
ಪಾಪಕ್ಕೆ ಲೇಪ ನಾಗೊರೆಹೊಲ್ಲಾ |
ಪ್ರಾಪಕ ಸ್ಥಾಪಕ ಹರಿ ಎಲ್ಲಾ ಜಗ
ದ್ವ್ಯಾಪಕ ನೆಂದರಿತರೆ ಇಲ್ಲಾ || ೯ ||

ಡಿಂಬದೊಳಗೆ ಚೇತನ ವಿಟ್ಟು ಜಗ-
ದಂಬರಮಣ ಮಾಡಿದ ಕಟ್ಟು
ಉಂಬುಡುವ ಕ್ರಿಯಗಳಷ್ಟು ನಿನ್ನ
ಬಿಂಬನಾಧೀನ ವೆಂದರೆ ಇಷ್ಟು || ೧೦ ||

ಲಕ್ಕುಮಿ ಅವನ ಪಟ್ಟದ ರಾಣಿ ದೇ-
ವರ್ಕಳು ಪರಿಚಾರಕ ಶ್ರೇಣಿ |
ವಕ್ಕಲು ನಾವೆಲ್ಲರು ಪ್ರಾಣಿದಶ-
ದಿಕ್ಕುನಾಳುವ ನಮ್ಮಧೊರೆಯಾಣೆ || ೧೧ ||

ಮೃತ್ಯುಲೋಕದ ಸಂಪದ ಪೊಳ್ಳು ಜಗ-
ನ್ಮಿಥ್ಯಾಮತವೆಂದಿಗು ಜೊಳ್ಳು |
ಶ್ರುತ್ಯನ್ಯರ್ಥ ಪೇಳ್ವದೆ ಸುಳ್ಳು ನೀ
ಭೃತ್ಯ ಕರ್ತನಾಗದಿರೆಲೋ || ೧೨ ||

ಮಾಧವನಲಿ ತನುಮನ ಮೆಚ್ಚು ಕಾಮ
ಕ್ರೋಧರೂಪದ ಕಲಿಮಲ ಕೊಚ್ಚು |
ಮೋದತೀರ್ಥರ ವಚನವ ನೆಚ್ಚು ಮಾಯಾ-
ವಾದಿ ಮತಕ್ಕೆ ದೆಂಕಿಯ ಹಚ್ಚು || ೧೩ ||

ಸವಿಉಳ್ಳರೆಕೇಳಿನ್ನಯ ಸೊಲ್ಲಾ ನಮ್ಮ
ಪವನನಯ್ಯನ ಪ್ರೇರಣೆ ಎಲ್ಲಾ |
ಎವೆಯಿಕ್ಕಲರಿಯಾದೀ ಜಗವೆಲ್ಲಾ ಎಂದು
ಶಿವ ತನ್ನ ಸತಿಗೆ ಪೇಳಿದನಲ್ಲಾ || ೧೪ ||

ಧೃವ ಬಲ್ಲಾದಿ ರಾಯರ ನೋಡು ನಿ-
ನ್ನವ ಗುಣಗಳೆಲ್ಲ ಈಡ್ಯಾಡು |
ಅವಶ್ಯವಾಗಿ ಕರ್ಮವ ಮಾಡು ಮಾ-
ಧವನವನೆಂದು ನಲಿದಾಡು || ೧೫ ||

ನಿಂದಾಸ್ತುತಿಗಳ ತಾಳಿಕೊ ಬಲು
ಸಂದೇಹ ಬಂದಲ್ಲಿ ಕೇಳಿಕೋ |
ಬಂದಪ್ಪರಿಂದಲ್ಲೆ ಬಾಳಿಕೋ ಗೋ-
ವಿಂದ ನಿನ್ನವನೆಂದು ಹೇಳಿಕೋ || ೧೬ ||

ಹಿಂದು ದೈವಗಳಿಗ್ಗಿರಿಯ ನೀತಾ ತನ್ನ
ತೋಂಡ ನೆಂದವರಿಗೆ ತಾ ಸೋತಾ |
ದಂಡಿಸಿ ದಯಮಾಡುವ ದಾತಾ ಭೂ-
ಮಂಡಲದೊಳಗೆಲ್ಲ ಪ್ರಖ್ಯಾತಾ || ೧೭ ||

ನಾಡ ಖೋಡಿ ದೈವಗಳಂತೆ ತನ್ನ
ಬೇಡಲು ತಾ ಬೇಡಿಕೊಳನಂತೆ |
ನೀಡುವ ನಿಖಿಳಾರ್ಥ ವದರಂತೆ ನಿಜ
ನೋಡಿಕೊ ನಿನಗ್ಯಾತರ ಚಿಂತೆ || ೧೮ ||

ಏನು ಕೊಟ್ಟರೆ ಕೈ ಚಾಚುವ ತನ್ನಾ-
ಧೀನನೆಂದರೆ ನಸು ನಾಚುವಾ |
ದಾನವ ರೊಡಲೂರಿ ಗೀಚುವಾ ತನ್ನಿಂ-
ತಾನೇವೆ ಮನದೊಳು ಸೂಚುವಾ || ೧೯ ||

ಕರ ಕರದಲ್ಲೀಗೆ ಬರುವನು ನಿಜ
ಶರಣಾರ ಕಾದುಕೊಂಡಿರುವಾನು |
ಮರೆತು ಬಿಟ್ಟವರ ತಾ ಮರೆವಾನು ತನ್ನ
ಸರಿ ಎಂದವರ ಹಲ್ಲು ಮುರಿವಾನು || ೨೦ ||

ಆರು ಮುನಿದು ಮಾಡುವದೇನು ಪ್ರೇರ್ಯ
ಪ್ರೇರಕರೊಳಗಿದ್ದು ಹರಿತಾನು |
ಓರಂತೆ ಕಾರ್ಯವ ನಡೆಸೋನು ಮುಖ್ಯ-
ಕಾರಣವೆಂದರಿಯದೆ ನೀನು || ೨೧ ||

ಹಲವು ಹಂಬಲಿಸಲ್ಯಾತಕೆ ಹುಚ್ಚ ವಿದ್ಯಾ
ಕುಲ ಶೀಲ ಧನದಿಂದ ಹರಿ ಮೆಚ್ಚ |
ಕಲಿಯುಗದೊಳಗೆ ಆರ್ಯರ ವೆಚ್ಚಾ ತಿಳಿ
ಸುಲುಭೋಪಾಯಾದಿಗಳ ನಿಚ್ಚಾ || ೨೨ ||

ದುರ್ಜನರೊಳು ದೈನ್ಯ ಬಡದಿರು ಸಾಧು
ಸಜ್ಜನರೊಳು ವೈರ ತೊಡದಿರು |
ಅರ್ಜುನಸಖನಂಘ್ರಿ ಬಿಡದಿರು ನಿ-
ರ್ಲಜ್ಜನಾಗಿ ಬಾಯ್ಬಿಡದಿರೂ || ೨೩ ||

ಭಯರೂಪದಿ ಒಳ ಹೊರಗಿದ್ದು ನಿ-
ರ್ಭಯ ನಾಮಕ ಧೈರ್ಯವಕದ್ದು |
ಭಯದೋರುವನೆಂಬದೆ ಮದ್ದು ಮಹಾ-
ಭಯಕೃದ್ಭಯ ಹರಿಯನೆಪೊಂದು || ೨೪ ||

ಪರಸತಿಯರ ಸಂಗವ ಬಿಡು ಹರಿ
ಸರ್ವೋತ್ತಮನೆಂದು ಕೊಂಡಾಡು |
ಪರಮಾತ್ಮನ ಧ್ಯಾನವ ಮಾಡು ಹರಿ
ದಾಸರಂಗಳವಡಗೂಡು || ೨೫ ||

ಸೃಷ್ಟಿಗೊಡೆಯ ಶ್ರೀದವಿಠ್ಠಲಾ ಅವಿ-
ಪಿಷ್ಟಾವಿಷ್ಟನಾಗಿದ್ದಲ್ಲಾ |
ಇಷ್ಟಾನಿಷ್ಟವ ಕೊಡಬಲ್ಲ ಮನ-
ಮುಟ್ಟಿದವರ ಬೆಂಬಿಡನಲ್ಲಾ || ೨೬ ||

-----

ಮೊದಲು ತೋರುತಿದೆ ಮಧುರ ವಿಷಯ ಸುಖ |
ತುದಿಗೆ ದುಃಖಾ ಅನೇಕಾ || ೧ ||

ದಾನ ಮಾನ ಬಹು ದಯಾ ಧರ್ಮತೋ |
ಜ್ಞಾನವೆ ಮಖ್ಖರ ಬೇಕೋ || ೨ ||

ತಾರಕ ಭವಭಯಹಾರ ಕೊನಿಗೇ |
ಶ್ರೀದವಿಠ್ಠಲನೆ ಕೇಳೋ || ೩ ||

-----

ರಾಗ - ಹಿಂದುಸ್ಥಾನಿದೇಶಿ ತಾಳ - ಏಕ

ಎಲೆ ಮನವೆ ಯದುಲಲಾಮನಗಲದೆ |
ಭಲಾ ಭಲಾ ಎನಿಸನುಗಾಲಾ || ಪ ||

ತನು ಮನ ಧನ ದಾರಾಪತ್ಯರ ನೀ |
ನೆನಿಸದಿರಭಿಮಾನಕೆ ಮೂಲಾ || ೧ ||

ಗುರು ಹಿರಿಯರ ಸತ್ಕರಿಸಿ ಬ್ಯಾಗ ಪರಿ |
ಹರಿಸಿಕೊ ಜನನ ಮರಣಜಾಲಾ || ೨ ||

ಶ್ರೀದವಿಠ್ಠಲನ ಪಾದ ಸ್ಮರಣೆಯ |
(ದ್ವಂದ್ವವ) ಸಾಧಿಸು ಮುಕ್ತಾಮಣಿಮಾಲಾ || ೩ ||

-----

ರಾಗ - ದೇಹಾಗ್ ತಾಳ - ಆದಿ

ಅವನೇ ಧನ್ಯನಲಾ ಜಗದೊಳಗಿವನೇ ಮಾನ್ಯನಲಾ || ಪ ||

ಆವಪರಿಯಲಿಂದಾದರು ತನ್ನಯ
ಭಾವಶುದ್ಧಿಯಲಿ ಭಗವತ್ಪರನಾದವನೇ ಧನ್ಯ || ೧ ||

ಆತ್ಮೇತರ ಸಂಸ್ಕೃತಿಯೊಳಿದ್ದು
ಸ್ವಾತ್ಮಲಾಭ ಸಿದ್ಧಿಯ ಸಾಧಿಸಿಕೊಂಡವನೆ ||೨||

ಶ್ರೀದವಿಠಲನ ಸಾಕ್ಷಾತ್ಕರಿಸಿ
ಸಾಧುಸೇವ್ಯ ಚಿತ್ಸುಖಮಯನಾದಂಥವನೆ ||೩||

-----

ರಾಗ - ಹಿಂದೂಸ್ಥಾನಿಕಾಪಿ ತಾಳ - ಛಾಪು

ಸುಖಪರವಯ್ಯಾ ಶ್ರೀಹರಿಲೀಲೆ ||ಪ||

ಆ ವೈಜಯಂತಿ ಕೌಸ್ತುಭ ವನಮಾಲಾ
ಪಾವನವಕ್ಷವಿಶಾಲ |
ಶ್ರೀವತ್ಸಾಂಕನ ದಾವನಕೊರಳೊಳು
ಕೇವಲ ಗುಂಜಾಮಾಲಾ ||೧||

ತ್ರಿಜಗಜ್ಜನ್ಮಾದಿಗಳಿಗೆ ಮೂಲಾ
ಜನಾರಿಗೆನಿಸುವಕಾಲಾ
ಭಜಿಪರ ಭಾಗ್ಯೋದಯಕಾನಂದ
ವ್ರಜದೊಳೀಗೋಪಿಯ ಕಂದಾ ||೨||

ಶ್ರೀದವಿಠಲ ಕೇಳು ಸುರತಸುಶೀಲಾ
ರಾಧಾಮನೋನುಕೂಲಾ
ಸಾಧಿಸಿ ವೃಂದಾವನದಲ್ಲಿ ಪೊಂಗೊಳ-
ಲೂದುವ ಗಾನವಿಲೋಲ ||೩||

-----

ರಾಗ - ಕಾನಡಾ ತಾಳ - ಆದಿ

ರಘುರಾಮರ ಪಾದವ ಹಿಡೀ ಹಿಡಿ ||ಪ||

ಹೆಣ್ಣು ಹೊನ್ನು ಮಣ್ಣು ಮೂರರಾಶೆಯ ಮಾಡಿದೆ |
ಅದರೊಳಗೇನದೆ ಹುಡೀ ಹುಡೀ

ಶ್ರೀದವಿಠ್ಠಲನ ಪಾದ ಸ್ಮರಣೆಯ
ಮರಿಯದೆ ಬೇಗನೆ ನುಡಿ ನುಡಿ

-----

## ಸುಳಾದಿ

ರಾಗ - ಆರಭಿ

ಅಂದು ಇಂದು ಎಂದೆಂದಿಗು ಗೋ-
ವಿಂದನೆ ಗತಿ ನಮಗೆಂದು
ಇಂದಿರೇಶ ವಿಧಿವಂದ್ಯ ನಮೋ ನತಬಂಧು
ಎಂದರಾನಂದವೀವ ನಮಗೆಂದೂ
ಬಂದ ಬಂದ ಭಯವೃಂದಗಳೋಡಿಸಿ
ಹಿಂದು ಮುಂದು ಎಡಬಲದೊಳಗಿಹ
ನಿರ್ದ್ವಂದ್ವನ ದಯಕೇನೆಂಬೆ ಮು-
ಕುಂದನ ಮೊರೆಹೋಗದಿರಲು ಭವ
ಬಂಧನ ಬಿಡಿಸುವರಾರಿಳೆಯೊಳು
ನಂದ ನಂದನ ಶ್ರೀದವಿಠಲನ
ಪೊಂದಿನೋಡು ಸುಖಸಾಂದ್ರನ ಹೇ ನಮಗೆಂದು

ತಾಳ - ಮಟ್ಟ

ಪಾಪಪುರುಷ ನಮ್ಮ ಸಮೀಪಕೆ ಬರಲ್ಯಾಕೆ
ಪಾಪಪಂಕವನು ಲೇಪಿಸಿಕೊಳಲ್ಯಾಕೆ
ಪಾಪಿಮನವೆ ಲಕ್ಷ್ಮೀಪತಿಯ ವ್ಯಾಪಾರವ ನೋಡು
ಪಾಪಗಳೀಡ್ಯಾಡು ರೂಪವೆ ಅಣುಮಹ-
ದ್ರೂಪವೇ ಗುಣ ನಾಮರೂಪವೇ ಸತ್‌ಚಿತ್ಸುಖ
ರೂಪಾತ್ಮಕ ನಿತ್ಯ ಆಪನ್ನಪಾಲ ಶ್ರೀದವಿಠಲ ತ್ರಿಜಗ-
ದ್ವ್ಯಾಪಕ ಸರ್ವವ್ಯಾಪಕನ ನೆರೆನಂಬು

ನಿವಹ ತನ್ಮಯವಾಯ್ತು ನೀನಾದರವನ
ವ್ಯವಹಾರವನುಸರಿಸುವರೆ ರಮಾಧವನ
ನವವಿಧ ಭಕುತಿ ಭಾಗ್ಯವ ಪಡಿಯೋ ಪಡೆದಪರೆ
ಶ್ರವಣಮಂಗಳ ಭಾಗವತ ಕೇಳು ಕೇಳುವರೆ
ಕವಿಜನರ ಕರುಣಕ್ಕೀಡಾಗು ಈಡಾಗುವರೆ
ಭುವನದೊಳಗುಳ್ಳ ಪುಣ್ಯತೀರ್ಥಕ್ಷೇತ್ರ
ಅವನಾದರು ಮಾಡು ಪವನಾಂತರಾತ್ಮ
ಶ್ರೀದವಿಠಲ ನಿನ್ನ ಸಾಕುವನು ನಿತ್ಯ ಕೃತಕೃತ್ಯ || ೩ ||

ತಾಳ - ಅಟ್ಟ

ನಾನ್ಯಾಕವನನುಸರಿಸುವೆ ನೆಂಬಿಯಾ
ನೀನು ಬಿಟ್ಟರವ ಬಿಡಲರಿಯನು ಕೇಳು
ತಾನೆ ತನ್ನರ್ಚನೆಗೊಂಬ ಬಿಂಬ ಮ-
ಹಾನು ಭಾವರೆಲ್ಲರು ಬಲ್ಲರು ಕೇಳು
ದೀನನಾಥ ನಮ್ಮ ಶ್ರೀದವಿಠಲನಿ-
ಗೇನೆಂಬೆನವನ ಕಾರುಣ್ಯಕೆ ನಮೋ ನಮೋ || ೪ ||

ತಾಳ - ಆದಿ

ಅಂತು ಇಂತು ಈ ಕಲಿಕಾಲದೊಳು
ಸಂತರ ಬೀಳದೆ ಬಹುಕಾಲಾ
ಸಂತೈಸುವ ಸಂತರ ಕಾಲವಪಿಡಿ
ಅಂತಕನವರಿಗೆ ನೀಪಾಲಾ
ಎಂತಾಗುವಿಯೊ ಆಂತ್ವರದೆ ಬಿಡು
ಭ್ರಾಂತಿಯು ಇನ್ನಾದರು ಬರಿದೆ
ಚಿಂತಿಸದಿರು ತನು ಮನೆ ಧನ ವನಿತೆಯ
ರಂತರಿಸುವರಲ್ಲದೆ ನಿನಗೇನು ಸ್ವ-
ತಂತ್ರವಿಲ್ಲ ನಿಜಮಂತ್ರವಿದೆ ಮಾ-
ಹಂತರೊಡೆಯ ಭಗವಂತನ ಮರೆಯದೆ
ಚಿಂತಿಸು ಚಿತ್ಸುಖಮಯನಾ
ನಿಂತು ಕೂತು ಮಲಗೆಂತಾದರು ಜಗ-
ದಂತರಾತುಮ ಶ್ರೀದವಿಠಲನ
ಚಿಂತಿಸು ಚಿತ್ಸುಖಮಯನ ನೀ ಚಿಂತಿಸು || ೫ ||

ಜತೆ

ಆತ್ಮಾಂತರಾತ್ಮಸರ್ವಾತ್ಮನ ಬಿಡದೆ ಮ-
ಹಾತ್ಮರೊಡೆಯ ಶ್ರೀದವಿಠಲಾತ್ಮನ ನೆರೆನಂಬೋ ||

-----

ರಾಗ - ಮಾಯಾಮಾಳವಗೌಳ ತಾಳ - ಏಕ

ಸಾಕಯ್ಯ ಸಾಕು ಸಾಕಯ್ಯ ನಮ-
ಗ್ಯಾಕಯ್ಯ ಇನ್ನವಿವೇಕರ ಸಂಗತಿ || ಪ ||

ಬುದ್ಧಿಶೂನ್ಯರಿಗೆ ಬುದ್ಧಿಯನ್ಹೇಳಲು
ಮದ್ದಾನೆ ಮೈಯ್ಯ ತೊಳೆದಂತಾಯಿತು || ೧ ||

ದುರುಳಜನರಿಗೆ ಧರ್ಮವನೊರೆಯಲು
ಕುರುಡಗೆ ಕನ್ನಡಿ ತೋರಿದಂತಾದೀತು || ೨ ||

ಶ್ರೀದವಿಠಲ ನೆನ್ನದಜ್ಞಾನಿಗೆ ಬೋಧಿಸೆ
ಬೋರ್ಗಲ್ಲ ಮುಂದೆ ಒದರಿದಂತಾಯಿತು || ೩ ||

-----

ರಾಗ - ಪೀಲು ತಾಳ - ಏಕ

ಬೇಡುವದೂ ಬಲು ಕಷ್ಟಾ || ಪ ||

ನೀಡದಿದ್ದವನೇ ನಷ್ಟಾ || ಅ.ಪ. ||

ನಾಚಿಕೆ ಎಲ್ಲನೂ ತೊರದೂ ಮಹಾ | ನೀಚರಿಗೆ ಬಾಯ್ತೆರದೂ || ೧ ||

ಕೊಟ್ಟಾರೆಂಬ ದುರಾಶಾ ಕ್ರಿಯಾ | ಬೃಷ್ಟರರಿಯರೂ ಕ್ಲೇಶಾ || ೨ ||

ಚಿತ್ತವೃತ್ತಿಯನು ಕಂಡೂ ಅಧಮರ | ಹೊತ್ತುಹೊತ್ತಿಗೆ ಕಾಣಿಸಿಕೊಂಡು || ೩ ||

ಗುಣಹೀನರ ಕೊಂಡಾಡೀ ಬಂದು | ಕ್ಷಣಕ್ಷಣಕವರನು ನೋಡೀ || ೪ ||

ಶ್ರೀದವಿಠ್ಠಲನ ಬಿಟ್ಟೂ | ಅಧಮಾಧಮರಿಗೆ ದೈನ್ಯ ಬಟ್ಟೂ || ೫ ||